# ಶಿವರಾತ್ರಿ




ಮಹಾಮಹೋಪಾಧ್ಯಾಯ, ಅದ್ವೈತವೇದಾಂತಸವ್ಯಸಾಚಿ, ವಿದ್ವಾನ್

**ಡಾ || ಕೆ. ಜಿ. ಸುಬ್ರಾಯಶರ್ಮಾ**




ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾಜಿಯವರ **"ಪ್ರಸ್ಥಾನತ್ರಯಂ"**-69 ಲೋಕಾರ್ಪಣ ಸಮಾರಂಭದಲ್ಲಿ
ಸನ್ಮಾನ್ಯರಾದ ಟಿ. ಕೆ. ತಿಮ್ಮರಾಜಶೆಟ್ಟಿ, ಬಿ. ಎನ್. ರಂಗಣ್ಣ, ಡಾ॥ ಕೆ. ವಿ. ರಾಮು (USA),
ಸಿ. ಕೆ. ಸುಬ್ಬನರಸಿಂಹ, ವಿ. ರಾಜಣ್ಣ; 20-1-2016, ಬುಧವಾರ



ಮಂಗಳೂರಿನಲ್ಲಿರುವ ಬ್ರಹ್ಮಸ್ಥಾನಂ ದೇವಾಲಯದಲ್ಲಿ ನಡೆದ ಸತ್ಸಂಗ ಭಜನ ಕಾರ್ಯಕ್ರಮದಲ್ಲಿ
ಪರಮಪೂಜ್ಯ **ಮಾತಾ ಅಮೃತಾನಂದಮಯಿಯವರಿಗೆ** ವಿದ್ವಾನ್ ಕೆ. ಜಿ. ಸುಬ್ರಾಯಶರ್ಮರಿಂದ
ಪ್ರಪ್ರಥಮ ಭಕ್ತಿಪೂರ್ವಕ ಮಾಲಾರ್ಪಣೆ; 10-1-2016, ಭಾನುವಾರ

ಆನಂದಗ್ರಂಥಮಾಲಾ–ಕುಸುಮ 14

# ಶಿವರಾತ್ರಿ

(12-2-2010 ರಂದು ಮಾಡಿದ 6 ಉಪನ್ಯಾಸಗಳ ಸಾರಸಂಗ್ರಹ)


**ಪ್ರವಚನಕಾರರು ಮತ್ತು ಲೇಖಕರು**

ಅಧ್ಯಾತ್ಮವಿದ್ಯಾಪ್ರವೀಣ, ವೇದವಿದ್ಯಾಭೂಷಣ, ಅದ್ವೈತಜ್ಞಾನಸಿಂಧು, ವಿದ್ಯಾವಿಧಿನಿಧಿ,
ವೇದಶ್ರೀ, ವೇದಾಂತವಾರಿಧಿ, ವೇದಾಂತಭಾಸ್ಕರ, ವೇದಾಂತಸರಸ್ವತಿ, ವೇದಾಂತಕೇಸರಿ,
ವೇದಾಂತ ಸಾರ್ವಭೌಮ, ವೇದಾಂತಕಾಮಧೇನು, ವೇದಾಂತರಾಜಹಂಸ, ವಿವೇಕ ಭಾಸ್ಕರ,
ಶಾಸ್ತ್ರನಿಧಿ, ಅದ್ವೈತವೇದಾಂತಕೇಸರಿ, ಅದ್ವೈತಜ್ಞಾನತೇಜ, ವೇದಾಂತಸಾಗರ, ವೇದಾಂತರತ್ನ,
ಶಾಸ್ತ್ರವಿದ್ಯಾನಿಧಿ, ವೇದಾಂತಚಿಂತಾಮಣಿ, ಅದ್ವೈತಸಾರತಿಲಕ, ವೇದಾಂತಪ್ರಭಾಕರ,
ಅದ್ವೈತ ವೇದಾಂತವಾರಿಧಿ, ಅದ್ವೈತವೇದಾಂತಚೂಡಾಮಣಿ, ಅದ್ವೈತವೇದತಿಲಕ,
ಅದ್ವೈತ ವೇದಾಂತವಿಚಕ್ಷಣ, ವೇದಾಂತಸಾರತಿಲಕ, ವೇದಾಗಮವಿದ್ಯಾಸಾಗರ,
ಸುವರ್ಣಕರ್ನಾಟಕ ಕನ್ನಡಿಗ, ಭುವಿ ವೇದಾಂತೈಕಶ್ರೇಷ್ಠರತ್ನ, ರಾಷ್ಟ್ರರತ್ನ,
ಸುವರ್ಣಕರ್ನಾಟಕ ಸುವರ್ಣವೇದಾಂತಿ, ವೇದಾಂತರತ್ನಾಕರ, ಸ್ವರ್ಣಭೂಷಣ,
ವೇದಾಂತಗಂಗಾಧರ, ಅದ್ವೈತವೇದಾಂತವಾಚಸ್ಪತಿ, ಅದ್ವೈತವೇದಾಂತಶಿಖಾಮಣಿ,
ಗೋವಿಂದಲಕ್ಷ್ಮೀಪುರಸ್ಕಾರ, ಬಸವನಗುಡಿರತ್ನ, ಶ್ರೀ ಶ್ರೀ ಸದ್ಗುರುಹೃದಯಭಾಸ್ಕರ,
ಅದ್ವೈತವೇದಾಂತ ಸವ್ಯಸಾಚಿ, ಸದ್ಗುರು ಸೇವಾ ಧುರೀಣ, ಪರಿಪೂರ್ಣ ಮಹನೀಯ ೨೦೧೨,
ಮಂತ್ರಾಲಯದ ಶ್ರೀಶ್ರೀಸುಶಮೀಂದ್ರತೀರ್ಥಸ್ವಾಮೀಜಿ **“ರಾಷ್ಟ್ರೀಯ ಜ್ಞಾನ ಪುರಸ್ಕಾರ”**,
ಅದ್ವೈತ ವೇದಾಂತ ಪ್ರತಿಭಾ ಪ್ರಕಾಶ, ಜಿಜ್ಞಾಸುಕಾಮಧೇನು, ಮುಮುಕ್ಷುಮೋಕ್ಷಧೇನು,
ಉಪನಿಷದ್ ರತ್ನಾಕರ, ಶ್ರೀ ಸಿದ್ಧಾರೂಢ ಸದ್ಭಾವನಾ ಪ್ರಶಸ್ತಿ, ವೇದಾಂತ ಪ್ರವಚನ ಚತುರ,
ವೇದಾಂತ ಪುರುಷಮಣಿ, ಶಾಂಕರಾದ್ವೈತವೇದಾಂತಾಚಾರ್ಯ, ಅದ್ವೈತವೇದಾಂತಸಾರಥಿ,
ಶ್ರೀಪ್ರಸನ್ನಗಣಪತಿ (ಬಲಮುರಿ) ಅನುಗ್ರಹ ಪ್ರಶಸ್ತಿ—೨೦೧೫, ಪ್ರಾಜ್ಞ ವೇದಾಂತ ಯೋಗ,
**ಸುವರ್ಣ ಕರ್ನಾಟಕ “ರಾಜ್ಯೋತ್ಸವ ಪ್ರಶಸ್ತಿ”—೨೦೦೫**, ಮತ್ತು
**“ಸುವರ್ಣ ಕರ್ನಾಟಕ ಸಾಹಿತ್ಯ ಪ್ರಶಸ್ತಿ”** ಪುರಸ್ಕೃತ

**ವೇದಾಂತಕೇಸರಿ, ಮಹಾಮಹೋಪಾಧ್ಯಾಯ ವೇ. ಬ್ರ. ಶ್ರೀ ವಿದ್ವಾನ್**
**ಡಾ॥ ಕೆ. ಜಿ. ಸುಬ್ರಾಯಶರ್ಮಾ,** ಎಂ.ಎ., ಡಿ.ಲಿಟ್.
(ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀಸ್ವಾಮಿಗಳ ಅಂತೇವಾಸಿ ಸಾಕ್ಷಾತ್‌ಶಿಷ್ಯರು)



**ಶ್ರೀ ನಿತ್ಯಾನಂದ ಪ್ರಕಾಶನ**
ಅಶೋಕನಗರ, ಬೆಂಗಳೂರು - 560 050
**ಮೇ 2016 – ದ್ವಿತೀಯ ಮುದ್ರಣ**

**"ಶಿವರಾತ್ರಿ"-14**
—12-2-2010 ಶುಕ್ರವಾರದಂದು ಮಾಡಿದ 6 ಉಪನ್ಯಾಸಗಳ ಸಾರ
**Shivaraatri** in Kannada
**14th** Flower in the '**Aananda Grantha Maalaa**' Series
by Vedanta Chakravarthi, Mahaamahopaadhyaaya,
Vidwan **Dr. K. G. SUBRAYA SHARMA, M.A., D.Litt.**
# 127, "**Seetha-Preethi**", Balaji Nagar,
ICICI Bank Cross Road, Uttarahalli Main Road
**P. O. Subrahmanyapura, Bengaluru - 560 061**
**Ph : 080-2639 6786 ; Mobile : 98862 81622**
e-mail: kgssharma@gmail.com

Published by
**Sri Nithyananda Prakashana**
No. 46, 4th Cross, Ashoknagar
Bengaluru - 560 050; Ph: 080 - 2242 6027

Pages: 48; **Price: Rs. 40/-** ; **ಬೆಲೆ: ರೂ. 40/-**

First Edition : **May 2010** ; **1000 Copies**
Second Edition : **May 2016** ; **1000 Copies**



**For Copies and other Books Please Contact**
**Vedanta Kesari, Mahaamahopaadhyaaya, Vidwan**
**Dr. K. G. SUBRAYA SHARMA, M.A., D.Litt.**
**# 127, "Seetha-Preethi", Balaji Nagar,**
**ICICI Bank Cross Rd., Uttarahalli Main Rd.**
**P. O. Subrahmanyapura, Bengaluru - 560 061**
**Ph: 080-2639 6786 ; Mobile: 98862 81622**
**e-mail: kgssharma@gmail.com**

Printed by
B. N. Nataraj
Sri Nithyananda Prakashana
# 46, 4th Cross, Ashoknagar, BSK 1st Stage
Bengaluru - 560 050. ✆ 2242 6027

# ನಮೋ ನಮಃ ಸದ್ಗುರುಪಾದುಕಾಭ್ಯಾಮ್

ನನ್ನ ಸದ್ಗುರುಪುಂಗವರಾದ ಪರಮಪೂಜ್ಯ ಶ್ರೀಶ್ರೀಸಚ್ಚಿದಾನಂದೇಂದ್ರ ಸರಸ್ವತೀ ಮಹಾಸ್ವಾಮಿಗಳವರು ಸ್ವತಃ ಯತಿಪುಂಗವರಾಗಿದ್ದರೂ, ನನಗೆ **ಶಿವರಾತ್ರಿ**ಯಂದು ಓಂ **ನಮಃ ಶಿವಾಯ** ಎಂಬ **ಶಿವಪಂಚಾಕ್ಷರೀ** ಮಂತ್ರವನ್ನೂ ಉಪದೇಶಿಸಿದ್ದರು. ನನ್ನಿಂದ ಮಹಾಶಿವರಾತ್ರಿಯಂದು ಶಿವನ ಪೂಜೆಯನ್ನೂ ನನ್ನ ಸದ್ಗುರುಗಳು ಮಾಡಿಸಿರುತ್ತಾರೆ. ಶಿವನ ಸ್ವರೂಪರೇ ಆಗಿದ್ದ ಸದ್ಗುರುಗಳಿಗೆ ಶಿವ, ಈಶ್ವರ, ಪರಮೇಶ್ವರ, ದಕ್ಷಿಣಾಮೂರ್ತಿ, ಶಂಕರ, ಮಹಾದೇವ—ಎಂದರೆ ತುಂಬಾ ಇಷ್ಟ. ವೈರಾಗ್ಯಚಕ್ರವರ್ತಿಯಾದ ಪರಮೇಶ್ವರನ ಗುಣಲೀಲೆಗಳನ್ನೂ ನನಗೆ ಸದ್ಗುರುಗಳು ಆಗಾಗ್ಗೆ ಹೇಳುತ್ತಲೇ ಇದ್ದರು.

**ಶಿವರಾತ್ರಿ** ಉತ್ಸವಗಳಲ್ಲಿ ಶಿವನನ್ನು ಕುರಿತ ಪ್ರವಚನಗಳನ್ನು ಸದ್ಗುರುಗಳು ತಾವು ಸ್ವತಃ ಮಾಡಿರುತ್ತಾರೆ, ಹಾಗೂ ನನ್ನಿಂದಲೂ ಅನೇಕ ಉಪನ್ಯಾಸಗಳನ್ನೂ ಮಾಡಿಸಿರುತ್ತಾರೆ. ಶ್ರೀಶಂಕರಾಚಾರ್ಯರ ಪರಮಭಕ್ತರೂ ಶ್ರೀಶಂಕರರ ಅನುಯಾಯಿಗಳೂ ಆಗಿದ್ದ ಸದ್ಗುರುಗಳಿಗೆ ಶಂಕರ, ಶಿವ ಎಂದರೆ ಸಹಜವಾಗಿಯೇ ಹೆಚ್ಚಿನ ಭಕ್ತಿಯೂ ಶ್ರದ್ಧೆಯೂ ತುಂಬಿಕೊಂಡಿದ್ದವು. ಶ್ರೀಶ್ರೀಗಳವರ ಮಹಾಸಮಾಧಿಯ ಅನಂತರವೂ ನಾನು ಶಿವರಾತ್ರಿ ಉತ್ಸವಗಳಲ್ಲಿ ನೂರಾರು ಉಪನ್ಯಾಸಗಳನ್ನು ಭಿನ್ನಭಿನ್ನ ವೇದಿಕೆಗಳಲ್ಲಿ ಮಾಡಿರುತ್ತೇನೆ. ಪ್ರತಿವರ್ಷವೂ **ಶಿವರಾತ್ರಿ**ಯಂದು ವಿಶೇಷವಾಗಿ ಶಿವನ ಆರಾಧನೆಯನ್ನೂ ಮಾಡುತ್ತಿರುತ್ತೇನೆ.

೧೨-೨-೨೦೧೦, ಶುಕ್ರವಾರದಂದು, ವಿರೋಧಿನಾಮಸಂವತ್ಸರದ ಮಾಘ ಕೃಷ್ಣ ಚತುರ್ದಶೀ, **ಮಹಾಶಿವರಾತ್ರಿ**ಯಂದು ಬೆಂಗಳೂರಿನ ಅನೇಕ ವೇದಿಕೆಗಳಲ್ಲಿ, ಒಂದೇ ದಿನ ಮಾಡಿದ ಆರು ಉಪನ್ಯಾಸಗಳ ಸಾರವನ್ನು ಸಂಗ್ರಹಿಸಿ, ಶ್ರೋತೃಗಳ ಅಪೇಕ್ಷೆಯಂತೆ **ಶಿವರಾತ್ರಿ** ಎಂಬೀ ಕೃತಿಯನ್ನು ಬರೆದಿರುತ್ತೇನೆ.

೨೦೧೦ ರಲ್ಲಿ ಹಿಂದೆಯೇ ಪ್ರಕಟಗೊಂಡಿದ್ದ ಈ ಕೃತಿಯು ಈಗ ೨೦೧೬ರಲ್ಲಿ ದ್ವಿತೀಯ ಆವೃತ್ತಿಯನ್ನು ಕಾಣುತ್ತಿದೆ. ಇದನ್ನು ಪ್ರೀತಿಯಿಂದ ಮುದ್ರಿಸಿಕೊಟ್ಟಿರುವ ಆತ್ಮೀಯ ಸನ್ಮಿತ್ರರಾದ ಶ್ರೀ ಬಿ. ಎನ್. ನಟರಾಜ್‌ರವರಿಗೆ ನನ್ನ ಕೃತಜ್ಞತೆಗಳು.

ಶ್ರೀದುರ್ಮುಖಿನಾಮಸಂವತ್ಸರದ
ವೈಶಾಖ ಶುದ್ಧ ಪಂಚಮೀ, ಶ್ರೀಶಂಕರಜಯಂತಿ
ತಾ॥ 11-5-2016, ಬುಧವಾರ

**ಡಾ॥ ಕೆ. ಜಿ. ಸುಬ್ರಾಯಶರ್ಮಾ**
ಉತ್ತರಹಳ್ಳಿ, ಬೆಂಗಳೂರು-61
2639 6786, 98862 81622

# ಶಿವರಾತ್ರಿ

ಈ ಗ್ರಂಥದ ಹೆಸರು **"ಶಿವರಾತ್ರಿ"**. ಮಾಘಮಾಸಕೃಷ್ಣಪಕ್ಷಚತುರ್ದಶೀ ದಿನದಂದು **ಮಹಾಶಿವರಾತ್ರಿ ಹಬ್ಬ**. ಹಿಂದುಗಳಾದ ನಮಗೆ ಇದು ಅತ್ಯಂತ ಪ್ರಶಸ್ತವಾದ ಪರ್ವಕಾಲ. ಇಂದು, ಉಪವಾಸವಿದ್ದು, ರಾತ್ರಿಯೆಲ್ಲ ಎಚ್ಚರ ವಾಗಿದ್ದು ಶಿವನ ಪೂಜೆಯನ್ನು ಮಾಡಿ, ಶಿವನ ಅನುಗ್ರಹಕ್ಕೆ ಎಲ್ಲರೂ ಪಾತ್ರರಾಗುವ ಶುಭವಾರ. ಇಂದಿನ ವಾರ ಮುಖ್ಯವಲ್ಲ, ಚತುರ್ದಶೀ ತಿಥಿಯೇ ಮುಖ್ಯ. ಸಮುದ್ರಮಥನ ಕಾಲದಲ್ಲಿ ಉಂಟಾದ ಮಹಾವಿಷವನ್ನು ಸ್ವತಃ ಪಾನಮಾಡಿ, ಜಗತ್ತಿಗೆ ಕಲ್ಯಾಣವನ್ನು ಮಾಡಿದ, ಕಾರುಣ್ಯಸಾಗರನೂ ವೈರಾಗ್ಯಚಕ್ರವರ್ತಿಯೂ ಆದ, ಪರಮೇಶ್ವರನನ್ನು ಪೂಜಿಸಿ ಧನ್ಯರಾಗುವ ದಿನವೇ ಶಿವರಾತ್ರಿ.

'**ಶಿವರಾತ್ರಿ**' ಎಂಬ ಈ ಕೃತಿಯಲ್ಲಿ ಶಿವನನ್ನು ಕುರಿತಂತೆ, ಹಾಗೂ ಶಿವರಾತ್ರಿ ನಿಮಿತ್ತ ಮಾಡಬೇಕಾದ ಜಪಪೂಜಾದಿಗಳನ್ನು ಕುರಿತಂತೆ ಕೆಲವು ವಿಷಯಗಳನ್ನು ತಿಳಿಸಿದ್ದೇನೆ. ಇದೆಲ್ಲವೂ, ನನ್ನ ಆರಾಧ್ಯದೇವತೆಯಾಗಿರುವ, ನನ್ನ ಪ್ರೀತಿಯ ಸದ್ಗುರುಪುಂಗವರಾದ **ಶ್ರೀಶ್ರೀಸಚ್ಚಿದಾನಂದೇಂದ್ರಸರಸ್ವತೀಮಹಾಸ್ವಾಮಿ**ಗಳವ ರಿಂದ ನಾನು ಪಡೆದುಕೊಂಡ ವಿಷಯಗಳು. ನಾನು ೧೨-೨-೨೦೧೦ ರಂದು ಬೆಂಗಳೂರಿನಲ್ಲಿ ಮಾಡಿದ **"ಶಿವರಾತ್ರಿ"** ಪ್ರವಚನಗಳ ಸಾರಸಂಗ್ರಹವಿದು. ಶ್ರೋತೃಗಳ ಅಪೇಕ್ಷೆಯಂತೆ ಇದನ್ನು ಬರೆದಿರುತ್ತೇನೆ.

ಶಿವನನ್ನು ವೇದಗಳಲ್ಲಿಯೂ ಪುರಾಣಗಳಲ್ಲಿಯೂ ಸ್ತುತಿಸಿರುತ್ತಾರೆ. ವೇದಾಂತಗಳಲ್ಲಿಯೂ ಶಿವ, ಈಶ, ಈಶ್ವರ ಮುಂತಾದ ಶಬ್ದಗಳಿಂದ ಈಶ್ವರನನ್ನು ವರ್ಣಿಸಿರುತ್ತಾರೆ. ಇದೆಲ್ಲವನ್ನೂ ಒಟ್ಟುಗೂಡಿಸಿ **"ಶಿವರಾತ್ರಿ"** ಎಂಬೀ ಕೃತಿಯಲ್ಲಿ ಸಂಕ್ಷೇಪವಾಗಿ ಸರಳವಾಗಿ ತಿಳಿಸಿರುತ್ತೇನೆ. ಶಿವನನ್ನು ವೇದಾಂತದಲ್ಲಿ ದಕ್ಷಿಣಾಮೂರ್ತಿಯೆಂದೂ ವರ್ಣಿಸುತ್ತಾರಲ್ಲವೇ? ಮೌನ ವ್ಯಾಖ್ಯಾನದಿಂದಲೇ ಉತ್ತಮಾಧಿಕಾರಿಗಳಿಗೆ ಅದ್ವೈತ ಪರಬ್ರಹ್ಮವನ್ನು ಉಪದೇಶಿಸಿದ ಪ್ರಥಮ ವೇದಾಂತಾಚಾರ್ಯನೆಂದರೆ ಶಿವನೇ ಅಲ್ಲವೇ? ಇಂಥ ಶಿವನನ್ನು ಸ್ಮರಿಸಿದ ದಿನವೇ **ಶಿವರಾತ್ರಿ**ಯಾಗುವುದರಲ್ಲಿ ಸಂಶಯವಿಲ್ಲ. ಈ ಗ್ರಂಥದಿಂದ ಶಿವಭಕ್ತರಿಗೆ ಹಾಗೂ ಅಧ್ಯಾತ್ಮಸಾಧಕರಿಗೆ ಪ್ರಯೋಜನವಾದರೆ ಅದೇ ನನಗೆ ಸಂತೋಷ. ಸದ್ಗುರುಗಳ ಹಾಗೂ ಸದಾಶಿವನ ಅನುಗ್ರಹವು ಎಲ್ಲರಿಗೂ ಉಂಟಾಗಲಿ.

**—ಲೇಖಕ**

# “ಶಿ ವ ರಾ ತ್ರಿ” ಗ್ರಂಥದ ಅಂತರಂಗ

# 1. "ಹಿಂದೂ" ಸಂಸ್ಕೃತಿಯಲ್ಲಿ ಹಬ್ಬಗಳು

ಭಾರತೀಯರಾದ ನಮ್ಮದು ಸನಾತನ ಹಿಂದೂ ಆರ್ಯಸಂಸ್ಕೃತಿ. ನಮ್ಮದು ವೈದಿಕಸಂಸ್ಕೃತಿ, ಪೌರಾಣಿಕಸಂಸ್ಕೃತಿ, ಋಷಿಮುನಿಗಳ ಪರಂಪರೆಯ ಆರ್ಷ ಸಂಸ್ಕೃತಿ. ಪವಿತ್ರವಾದ ಹಾಗೂ ಮಂಗಳಕರವಾದ ಸಂಸ್ಕೃತಿ ಭಾರತೀಯರದ್ದು. ಪ್ರತಿಯೊಬ್ಬ ಮನುಷ್ಯನಲ್ಲಿಯೂ, ಪ್ರತಿಯೊಂದು ಪ್ರಾಣಿಯಲ್ಲಿಯೂ ಹಾಗೂ ಪ್ರತಿಯೊಂದು ವಸ್ತುವಿನಲ್ಲಿಯೂ ದೇವತ್ವವನ್ನು, ದಿವ್ಯತ್ವವನ್ನು ಕಾಣುವ ಸಂಸ್ಕೃತಿಯೇ ನಮ್ಮದು. ಯಾರನ್ನೂ ನಿಂದಿಸದೇ, ಯಾವುದನ್ನೂ ದ್ವೇಷಿಸದೇ ಪ್ರತಿಯೊಬ್ಬರನ್ನೂ ಮತ್ತು ಪ್ರತಿಯೊಂದನ್ನೂ ಪ್ರೀತಿಸುತ್ತಾ ತಾನೂ ಸಂತೋಷ ವಾಗಿ ಜೀವನವನ್ನು ನಡೆಸುತ್ತಾ ಯಾವಾಗಲೂ ಎಲ್ಲೆಲ್ಲಿಯೂ ಆನಂದವಾಗಿರುವ ಸಂಸ್ಕೃತಿಯೇ ಭಾರತೀಯ ಸನಾತನ ವೈದಿಕ ಹಿಂದೂಸಂಸ್ಕೃತಿ.

ಹಿಂದೂಸಂಸ್ಕೃತಿಯಲ್ಲಿ ನಮಗೆ ಪ್ರತಿದಿನವೂ ಹಬ್ಬವೇ, ಪ್ರತಿಯೊಂದು ಕ್ಷಣವೂ ಪರ್ವಕಾಲವೇ. ನಿತ್ಯೋತ್ಸವವೇ ಹಿಂದೂ ಸಂಸ್ಕೃತಿಯ ವಿಶೇಷ. ಏನಾದರೊಂದು ನಿಮಿತ್ತದಿಂದ ಮನೆಯಲ್ಲಿ ಹಾಗೂ ಸಮಾಜದಲ್ಲಿ ಒಂದು ಸಂತೋಷದ ಹಬ್ಬ, ಸಮಾರಂಭ ಹಾಗೂ ಉತ್ಸವಗಳು ಇರಲೇಬೇಕು. ಹೀಗಾಗಿ ಚೈತ್ರಮಾಸದ ಶುಕ್ಲಪಕ್ಷದ ಪಾಡ್ಯದಿಂದ ಪ್ರಾರಂಭಗೊಂಡು ಅಂದರೆ ಚಾಂದ್ರಮಾ ನಯುಗಾದಿಯಿಂದ ಪ್ರಾರಂಭಿಸಿ ಫಾಲ್ಗುಣಮಾಸ ಕೃಷ್ಣಪಕ್ಷ ಅಮಾವಾಸ್ಯಾವರೆಗೂ ಇಡೀ ವರ್ಷದ ಪ್ರತಿದಿನವೂ ಹಬ್ಬವೇ ಆಗಿರುತ್ತದೆ. ನಿತ್ಯ ಸಂತೋಷ, ನಿತ್ಯ ಸುಖ, ನಿತ್ಯ ಹರ್ಷ, ನಿತ್ಯೋತ್ಸವ, ನಿತ್ಯಾನಂದದ ದ್ಯೋತಕವಾಗಿರುವುದೇ ಹಿಂದೂಸಂಸ್ಕೃತಿಯ ವಿಶೇಷ.

ಈ ನಿತ್ಯೋತ್ಸವದ ಜೊತೆಜೊತೆಗೇ ಕೆಲವು ವಿಶೇಷ ಮಹೋತ್ಸವಗಳೂ ಸೇರಿಕೊಂಡಿರುತ್ತವೆ. ಇದರಿಂದ ತುಪ್ಪದ ಜೊತೆಯಲ್ಲಿ ಸಕ್ಕರೆ ಹಾಗೂ ಜೇನು ಸೇರಿದಂತೆ ಹಿಂದೂಸಂಸ್ಕೃತಿಗೆ ಇನ್ನೂ ಹೆಚ್ಚಿನ ಮೆರಗು, ಘನತೆ, ವಿಶೇಷತೆಗಳು ಸೇರಿದಂತಾಗುತ್ತದೆ. ಇಂಥ ವಿಶೇಷ ಹಬ್ಬಗಳ ಸಾಲಿನಲ್ಲಿ ಈ **ಮಹಾಶಿವರಾತ್ರಿ** ಹಬ್ಬವೂ ಒಂದು. ಈ ಮಹಾಶಿವರಾತ್ರಿ ಹಬ್ಬವು ವರ್ಷದ ಕಡೆಯ ಹಬ್ಬವಾಗಿದ್ದು ಇಡೀ ವರ್ಷವನ್ನೇ ಶಿವಮಯವನ್ನಾಗಿಸುವ, ಮಂಗಳಮಯವನ್ನಾಗಿಸುವ ಮಹೋತ್ಸವ, ಮಹಾಪರ್ವವೆಂದರೂ ತಪ್ಪಾಗದು. ಇಂಥಾ ಪರಮಪವಿತ್ರವೂ ಪರಮಮಂಗಳವೂ, ಪರಮಶ್ರೇಷ್ಠವೂ ಆದ **ಮಹಾಶಿವರಾತ್ರಿ** ಹಬ್ಬವನ್ನು ಕುರಿತು ಈ ಗ್ರಂಥದಲ್ಲಿ ಕೆಲವು ವಿಷಯಗಳನ್ನು ಚಿಂತಿಸಲಾಗಿದೆ. ಭಾರತೀಯ ರಿಗೆ, ಅದರಲ್ಲೂ ಅಧ್ಯಾತ್ಮಸಾಧಕರಿಗೆ, ಅದರಲ್ಲೂ ಶಿವಭಕ್ತರಿಗೆ ಉಪಯುಕ್ತ ವಾಗುವ ಅನೇಕ ವಿಷಯಗಳನ್ನೂ, ಕೆಲವು ಶಿವಸ್ತೋತ್ರಗಳನ್ನೂ ಇಲ್ಲಿ ತಿಳಿಸಿದೆ. ಇದರಿಂದ '**ಶಿವರಾತ್ರಿ**'ಯ ಮಹತ್ತ್ವವು ತಿಳಿಯುತ್ತದೆ.

## 2. ಮಹಾಶಿವರಾತ್ರಿ

ಮಾಘಮಾಸ ಕೃಷ್ಣಪಕ್ಷದ ಚತುರ್ದಶೀ ತಿಥಿಯನ್ನು **ಮಹಾಶಿವರಾತ್ರೀ** ಎಂದು ಕರೆಯುತ್ತೇವೆ. ಇಂದು, ರಾತ್ರಿಯೆಲ್ಲಾ ಪರಮೇಶ್ವರನನ್ನು ಪೂಜಿಸುತ್ತಾ ಸ್ಮರಿಸುತ್ತಾ ಆರಾಧಿಸುವ ಪರ್ವಕಾಲವಿದು. ಲಿಂಗರೂಪಿಯಾದ ಈಶ್ವರನಿಗೆ ಪಂಚಾಮೃತಾಭಿಷೇಕ, ಗಂಗಾಭಿಷೇಕವನ್ನು ಮಾಡಿ ತ್ರಿದಳ ಬಿಲ್ವಪತ್ರಗಳಿಂದ ಪರಮೇಶ್ವರನನ್ನು ಪೂಜಿಸಿ, ಸ್ತುತಿಸಿ, ಪವಿತ್ರವಾದ ಪಂಚಾಕ್ಷರೀಮಂತ್ರವನ್ನು ಜಪಿಸುತ್ತಾ, ಪರಶಿವನನ್ನು ಸಂತೋಷಗೊಳಿಸಿ, ಆ ಈಶ್ವರನಿಂದ ಇಷ್ಟವಾದ ವರಗಳನ್ನು ಪಡೆದುಕೊಳ್ಳುವ ಸುವರ್ಣಸಂಧಿಕಾಲವೇ **ಮಹಾಶಿವರಾತ್ರಿಯು**.

ಯಾವುದೇ ದೇವರನ್ನು ಆರಾಧಿಸಬೇಕಾದರೂ ಹಗಲು ಸಮಯವೇ ಮುಖ್ಯವಾದದ್ದು. ಜಪತಪಾದಿಗಳು, ಹೋಮ ಹವನಾದಿಗಳು, ಪೂಜಾ ನಮಸ್ಕಾರಾದಿಗಳು, ಧ್ಯಾನಮೌನಾದಿಗಳು, ಸ್ನಾನಸಂಧ್ಯಾದಿಗಳು, ಅಭಿಷೇಕ ಅರ್ಚನಾದಿಗಳು, ದಾನಧರ್ಮಾದಿಗಳು—ಹೀಗೆ ಯಾವುದೇ ಪುಣ್ಯ ಕರ್ಮ ಗಳನ್ನು ಮಾಡಬೇಕಾದರೂ ಹಗಲುವೇಳೆಯೇ ಶ್ರೇಷ್ಠವಾದದ್ದು. ಸೂರ್ಯೋದಯ ದಿಂದ ಪ್ರಾರಂಭಿಸಿ ಸೂರ್ಯಾಸ್ತಮಾನದ ಒಳಗಿರುವ ಕಾಲವೇ ಪೂಜಾ ಜಪಾದಿಗಳಿಗೆ ಪ್ರಶಸ್ತವಾಗಿರುತ್ತದೆ. ರಾತ್ರಿ ಸಮಯದಲ್ಲಿ ಸಾಮಾನ್ಯವಾಗಿ ಯಾವ ದೇವತಾರಾಧನೆಯನ್ನೂ ಮಾಡುವ ಸಂಪ್ರದಾಯವು ಇಲ್ಲ. ಏಕೆಂದರೆ **ರಾತ್ರಿ**— ಎಂದರೇ ಕತ್ತಲೆ; ಕತ್ತಲೆ ಎಂದರೇ ಅಮಂಗಳ; ಕತ್ತಲೆ ಎಂದರೇ ಅಪ್ರಶಸ್ತ, ಭಯ, ಅಪವಿತ್ರ ಎಂದೇ ನಾವೆಲ್ಲರೂ ನಂಬಿರುತ್ತೇವೆ.

ಆದರೆ ಪರಮೇಶ್ವರನಿಗೆ ರಾತ್ರಿಯಲ್ಲಿಯೇ ಪೂಜೆಯಾಗಬೇಕು. ಅಮಂಗಳ ವಾದ ಅಂದರೆ ಅಶಿವವಾದ ರಾತ್ರಿಯನ್ನು ಶಿವವನ್ನಾಗಿಸುವ, ಮಂಗಳವನ್ನಾಗಿ ಸುವ ಈಶ್ವರನ ಈ ಆರಾಧನೆಯ ಹಬ್ಬಕ್ಕೆ **ಶಿವರಾತ್ರಿ** ಎಂದೇ ಹೆಸರಾಯಿತು. ಪರಮಮಂಗಳಮೂರ್ತಿಯಾದ ಸಚ್ಚಿದಾನಂದಸ್ವರೂಪಿಯಾದ ಪರಮೇಶ್ವರನ ಸಂಬಂಧದಿಂದ, ಅಮಂಗಳಸ್ವರೂಪವಾದ ರಾತ್ರಿಯೂ ಮಂಗಳವೇ ಆಗಿ ಬಿಡುವುದರಿಂದ ಇದು **ಶಿವರಾತ್ರಿ** ಹಬ್ಬವಾಯಿತು. ಇನ್ನು ಸಂಸಾರಿಗಳಾದ ಅಜ್ಞಾನಾಂಧಕಾರದಲ್ಲಿ ಮುಳುಗಿರುವ ಜೀವರುಗಳೂ ಕೂಡ ಈ ಶಿವನ ಆರಾಧನೆಯಿಂದ ಶಿವಸ್ವರೂಪರೇ ಮಂಗಳಸ್ವರೂಪರೇ ಆಗಿಬಿಡುತ್ತಾರಲ್ಲವೆ? ಇಂದು ಸಂಜೆ ಆರು ಘಂಟೆಯಿಂದ ನಾಳೆ ಬೆಳಗ್ಗೆ ಆರು ಘಂಟೆಯವರೆಗೂ, ಅಂದರೆ ಹನ್ನೆರಡು ಘಂಟೆಗಳ ಕಾಲವೂ ಶಿವನ ಆರಾಧನೆಯಲ್ಲಿಯೇ ಸಮಯ ವನ್ನು ಕಳೆಯುವವರಿಗೆ ಎಲ್ಲವೂ ಶಿವವೇ, ಮಂಗಳವೇ ಆಗಿಬಿಡುತ್ತದೆ. ಆದ್ದರಿಂದಲೇ ಇದು **ಮಹಾಶಿವರಾತ್ರಿ** ಎನಿಸಿಕೊಂಡಿರುತ್ತದೆ.

# 3. ಕೃಷ್ಣಚತುರ್ದಶಿಯ ಮಹತ್ತ್ವ

ಒಬ್ಬೊಬ್ಬ ದೇವತೆಯ ಆರಾಧನೆಗೂ ಒಂದೊಂದು ವಿಶೇಷ ತಿಥಿಯು ಇರುತ್ತದೆ. ಆ ತಿಥಿಗೂ ಆ ದೇವತೆಗೂ ಒಂದು ವಿಶೇಷ ಸಂಬಂಧವಿರುತ್ತದೆ. ಆದ್ದರಿಂದ ಆಯಾ ತಿಥಿಗಳಲ್ಲಿ ಆಯಾ ದೇವತೆಗಳನ್ನು ಪೂಜಿಸುವುದರಿಂದ ಆಯಾ ದೇವರುಗಳಿಗೆ ತುಂಬಾ ಸಂತೋಷವುಂಟಾಗಿ ಸುಪ್ರೀತರಾಗಿ ಆಯಾ ದೇವರುಗಳು ತಮ್ಮ ಭಕ್ತರುಗಳಿಗೆ ಬೇಡಿದ ವರಗಳನ್ನು ಬೇಗನೆ ಕರುಣಿಸುತ್ತಾರೆ.

**ಗೌರಿಗೆ** ತದಿಗೆ ಮತ್ತು ಪಂಚಮೀ ತಿಥಿಗಳು, **ಗಣಪತಿಗೆ** ಚತುರ್ಥೀ, **ನಾಗದೇವತೆ**ಗಳಿಗೆ ಪಂಚಮೀ, **ಸುಬ್ರಹ್ಮಣ್ಯಸ್ವಾಮಿ**ಗೆ ಷಷ್ಠೀ, **ಸೂರ್ಯ**ನಿಗೆ ಸಪ್ತಮೀ, **ಶ್ರೀಕೃಷ್ಣ**ನಿಗೆ ಅಷ್ಟಮೀ, **ಶ್ರೀರಾಮ**ನಿಗೆ ನವಮೀ, **ಶಮೀ ವೃಕ್ಷದ** (ಬನ್ನಿ ಮರದ) ಪೂಜೆಗೆ ವಿಜಯದಶಮೀ, **ಮಹಾವಿಷ್ಣು**ವಿಗೆ ಏಕಾದಶೀ, **ಪಾರಣೆ**ಗೆ ದ್ವಾದಶೀ, **ಆಂಜನೇಯ** ಮತ್ತು **ನೃಸಿಂಹದೇವರಿಗೆ** ತ್ರಯೋದಶೀ, **ದತ್ತಾತ್ರೇಯ ಸದ್ಗುರು**ಗಳಿಗೆ ಪೂರ್ಣಿಮಾ—ಹೀಗೆ ಪ್ರತಿಯೊಂದು ದೇವರಿಗೂ ಒಂದೊಂದು ತಿಥಿಯು ಪ್ರಶಸ್ತವಾಗಿರುತ್ತದೆ.

ಆದರೆ ಪರಮೇಶ್ವರನ ಆರಾಧನೆಗೆ ಪ್ರಶಸ್ತವಾದ ತಿಥಿ ಎಂದರೆ **ಚತುರ್ದಶೀ ತಿಥಿ**; ಅದೂ ಶುಕ್ಲಪಕ್ಷದ ಚತುರ್ದಶೀ ತಿಥಿಯಲ್ಲ; ಮತ್ತೇನೆಂದರೆ **ಕೃಷ್ಣಪಕ್ಷದ ಚತುರ್ದಶೀ ತಿಥಿ**. ಕೃಷ್ಣಪಕ್ಷದಲ್ಲಿ ಚಂದ್ರನ ಕಾಂತಿಯು ದಿನೇ ದಿನೇ ಕ್ಷೀಣಿಸುತ್ತಾ ಬರುತ್ತದೆ. ಕೃಷ್ಣಪಕ್ಷದಲ್ಲಿ ದಿನದಿನಕ್ಕೂ ಕತ್ತಲೆಯು ಹೆಚ್ಚಾಗುತ್ತಾ ಹೋಗುತ್ತದೆ. ಶುಕ್ಲಪಕ್ಷದ ರಾತ್ರಿಯು ತೇಜೋಮಯವಾಗಿಯೂ ಕೃಷ್ಣಪಕ್ಷದ ರಾತ್ರಿಯು ತಮೋಮಯವಾಗಿಯೂ ಇರುವುದನ್ನು ನಾವುಗಳು ಕಾಣುತ್ತೇವೆ.

ಇನ್ನು ಈ ಕೃಷ್ಣಪಕ್ಷದ ಅಮಾವಾಸ್ಯೆಯಂತೂ ಕಗ್ಗತ್ತಲಿನ ದಿನವೇ. ಈ ಅಮಾವಾಸ್ಯೆಯ ಹಿಂದಿನ ದಿನವೇ **ಚತುರ್ದಶೀ ತಿಥಿ**. ಅಮಾವಾಸ್ಯೆಯು ಕಳೆಯಿತೆಂದರೆ ಮಾರನೆಯ ದಿನವೇ ಶುಕ್ಲಪಕ್ಷದ ಪ್ರಾರಂಭ. ಹೀಗೆ ಈ ಕೃಷ್ಣ ಪಕ್ಷದ ಚತುರ್ದಶೀ ತಿಥಿಯು, ರಾತ್ರಿಯ ಅಂದರೆ ಕತ್ತಲೆಯ ಪರಮಾವಧಿ ಯಾಗಿರುತ್ತದೆ. ಇದು ಎರಡು ಮಾಸಗಳ, ಎರಡು ಪಕ್ಷಗಳ, ಎರಡು ತಿಥಿಗಳ, ಎರಡು ದಿನಗಳ ಸಂಧಿಕಾಲವಾಗಿರುವುದರಿಂದ ಅತ್ಯಂತ ಪ್ರಶಸ್ತವಾದ ತಿಥಿ ಯಾಗಿರುತ್ತದೆ. ಈ ರಾತ್ರಿಯು ಕತ್ತಲೆಯ ಸ್ವರೂಪವಾದ್ದರಿಂದ ನಿಜಕ್ಕೂ ಅಮಂಗಳವೇ, ಅಶಿವವೇ ಆಗಿರುತ್ತದೆ. ಇಂಥಾ ದಿನದಂದು ಸಚ್ಚಿದಾನಂದ ಮಂಗಳಸ್ವರೂಪಿಯಾದ, ದಕ್ಷಿಣಾಮೂರ್ತಿಸ್ವರೂಪಿಯಾದ, ಜ್ಞಾನಸ್ವರೂಪಿ ಯಾದ, ಸ್ವಯಂಜ್ಯೋತಿಃಸ್ವರೂಪಿಯಾದ, ವೈರಾಗ್ಯಮೂರ್ತಿಯಾದ, ಸ್ವಾತ್ಮಾ ರಾಮನಾದ, ಪರಮೇಶ್ವರನನ್ನು ಪೂಜಿಸುವುದರಿಂದ ಇದು ಮಂಗಳರಾತ್ರಿ, ಪವಿತ್ರರಾತ್ರಿ, ಶುಭರಾತ್ರಿ ಹಾಗೂ **ಶಿವರಾತ್ರಿ**ಯಾಗುವುದರಲ್ಲಿ ಸಂಶಯವುಂಟೇ?

# 4. ಮೃತ್ಯುಂಜಯ

ಶಿವನಿಗೆ ಮೃಡ, ಶಂಕರ, ಹರ, ಈಶ್ವರ, ಕಾಲಕಾಲ, ಮಹಾದೇವ— ಮುಂತಾದ ಅನೇಕ ಹೆಸರುಗಳಿವೆ. ಆದರೆ ಈ ಹೆಸರುಗಳೇ ಅಲ್ಲದೇ ಶಿವನಿಗೆ **'ಮೃತ್ಯುಂಜಯ'**—ಎಂಬ ವಿಶೇಷನಾಮವೂ ಇರುತ್ತದೆ. ಈ ಹೆಸರು ಪರಮ ಶಿವನಿಗೆ ಮಾತ್ರವೇ ಅನ್ವರ್ಥವಾಗಿರುತ್ತದೆ. ಉಳಿದ ಹರಿ, ಬ್ರಹ್ಮ, ಆದಿತ್ಯ, ಇಂದ್ರ, ಅಗ್ನಿ, ವಾಯು, ಕುಬೇರ—ಮುಂತಾದ ಯಾವ ದೇವತೆಗಳನ್ನೂ ಶಾಸ್ತ್ರದಲ್ಲಿ **'ಮೃತ್ಯುಂಜಯ'** ಎಂದು ಕರೆದಿಲ್ಲ. ಆದರೆ ನಮ್ಮ ಈ ಪರಮೇಶ್ವರನೊಬ್ಬನು ಮಾತ್ರವೇ **ಮೃತ್ಯುಂಜಯ**ನೆನಿಸಿರುತ್ತಾನೆ. **'ಮೃತ್ಯುಂಜಯ'**ನೆಂದ ಕೂಡಲೇ ನಮ್ಮ ಕಣ್ಣೆದುರಿಗೆ ಬಂದು ನಿಲ್ಲುವ ದೇವತೆಯೆಂದರೆ **ಶಿವನೇ;** ಶಿವ—ಎಂದಕೂಡಲೇ **ಮೃತ್ಯುಂಜಯ**ನ ಸ್ಮರಣೆಯಾಗುತ್ತದೆಯಲ್ಲವೆ?

ಸರಿ, **'ಮೃತ್ಯುಂಜಯ'**—ಎಂದರೆ ಏನರ್ಥ? ಇದರ ಅಂತರಾರ್ಥವೇನು? ಎಂಬುದನ್ನು ನೋಡೋಣ. **ಮೃತ್ಯುಂ ಮರಣಂ, ಜಯತಿ ನಾಶಯತಿ ದೂರೀಕರೋತಿ ಇತಿ ಮೃತ್ಯುಂಜಯಃ,** ಮೃತ್ಯುವನ್ನು ಎಂದರೆ ಅಕಾಲದ ಅಪಮೃತ್ಯುವನ್ನು ದೂರಮಾಡುವವನೇ ಮೃತ್ಯುಂಜಯನು. ಶಿವನು ಸ್ವತಃ ತಾನು ಜನ್ಮಮರಣ ರಹಿತನಾಗಿದ್ದು ತನ್ನ ಭಕ್ತರನ್ನೂ ಅಮೃತರನ್ನಾಗಿ ಮಾಡುವ ಕಾರುಣ್ಯಧೀರ ದೇವತೆಯು. ಶಿವನು ತಾನು ಸ್ವತಃ ಮೃತ್ಯುಂಜಯನಾಗಿರುವುದರಿಂದಲೇ ತನ್ನ ಭಕ್ತರನ್ನೂ ಮೃತ್ಯುಂಜಯರನ್ನಾಗಿ ಮಾಡಬಲ್ಲ ಸಮರ್ಥ ದೇವತೆಯು.

ಮೃತ್ಯುವೆಂದರೆ ಸಾವು ಎಂದರ್ಥ. ಸಾವೆಂದರೆ ಮರಣವೆಂದರ್ಥ. ಇಲ್ಲಿ ಮರಣ, ಮೃತ್ಯು, ಸಾವು—ಎಂದರೆ ಕೊನೆಯಲ್ಲಿ ಪ್ರಾಣಹೋಗುವುದು ಎಂದೇ ಅರ್ಥವನ್ನು ಮಾಡಬೇಕಾಗಿಲ್ಲ. ಮತ್ತೇನೆಂದರೆ: ಮನಸ್ತಾಪ, ರೋಗರುಜಿನಾದಿಗಳು, ಅಪಮಾನ, ಆಧಿವ್ಯಾಧಿಗಳು, ಬಡತನ, ಆಧ್ಯಾತ್ಮಿಕ ಆಧಿಭೌತಿಕ ಹಾಗೂ ಆಧಿದೈವಿಕವಾಗಿರುವ ತಾಪತ್ರಯಗಳು, ನೆಂಟರಿಷ್ಟರಿಂದ ಹಾಗೂ ಶತ್ರುಗಳಿಂದ ಉಂಟಾಗುವ ಕಿರಿಕಿರಿಗಳು—ಎಲ್ಲವೂ ಮೃತ್ಯುವೆನಿಸುತ್ತವೆ. ಮಾನವರ ಅಶಾಂತಿಗೆ ಕಾರಣವಾದವುಗಳೆಲ್ಲವೂ ಮೃತ್ಯುವೇ ಆಗಿರುತ್ತವೆ. ಅಮಂಗಳವೆಲ್ಲವೂ ಮೃತ್ಯುವೇ. ದುಃಖಗಳೆಲ್ಲವೂ ಮರಣವೇ ಆಗಿರುತ್ತವೆ. ಇಂಥ ಮೃತ್ಯುವನ್ನು ಗೆದ್ದ ನಿತ್ಯಾನಂದ, ಸಹಜಾನಂದ, ಬ್ರಹ್ಮಾನಂದ, ಸ್ವರೂಪಾನಂದನಿಷ್ಠನಾದ ಏಕೈಕ ದೇವತೆಯೆಂದರೆ **ಶಂಕರ**ನಾದ **ಮೃತ್ಯುಂಜಯ**ನೆಂಬ ಶಿವನೊಬ್ಬನೇ. ಇಂಥ ಮೃತ್ಯುಂಜಯ ಪರಮೇಶ್ವರನ ಸ್ಮರಣೆಯಿಂದ, ಪೂಜೆಯಿಂದ, ಜಪಾನುಷ್ಠಾನದಿಂದ, ಆರಾಧನೆಯಿಂದ ಮಾನವರಿಗೆ ಸಕಲ ಸಂಪತ್ತುಗಳೂ ಪ್ರಾಪ್ತವಾಗುವುದರಲ್ಲಿ ಸಂಶಯವುಂಟೆ? ಮೃತ್ಯುಂಜಯನ ಕೃಪಾನುಗ್ರಹದಿಂದ ಜಗತ್ತಿನ ಸಕಲ ಸಂಕಟಗಳೂ ದೂರವಾಗುತ್ತವೆ.

# 5. ಮಹಾಮೃತ್ಯುಂಜಯಮಂತ್ರ

ಒಬ್ಬೊಬ್ಬ ದೇವತೆಗೂ ಇಷ್ಟವಾದ, ಪ್ರಿಯವಾದ ಜಪ್ಯಮಂತ್ರಗಳಿರುತ್ತವೆ. ನವಗ್ರಹಗಳಿಗೂ ಅವರವರ ಜಪ್ಯಮಂತ್ರಗಳಿರುತ್ತವೆ. ಆಯಾ ಮಂತ್ರಗಳನ್ನೇ ಪುರಶ್ಚರಣೆಮಾಡುವುದರಿಂದ ಆಯಾ ದೇವತೆಗಳಿಗೆ ಸಂತೋಷವುಂಟಾಗಿ ಆಯಾ ದೇವತೆಗಳು ವರಗಳನ್ನು ನೀಡುತ್ತಾರೆ. ಈ ಮಂತ್ರಗಳು ವೈದಿಕ, ಪೌರಾಣಿಕ, ತಾಂತ್ರಿಕ ಹಾಗೂ ಆಗಮಿಕವಾಗಿರುತ್ತವೆ.

ಪ್ರಕೃತದಲ್ಲಿ , ಶಿವನು ವೇದೋಕ್ತ ಹಾಗೂ ಪುರಾಣೋಕ್ತ ದೇವತೆಯಾಗಿರುವುದರಿಂದ ಇವನು ಪ್ರಾಚೀನ ದೇವತೆಯಾಗಿರುತ್ತಾನೆ. ಪರಮೇಶ್ವರನಿಗೆ ಅತ್ಯಂತ ಪ್ರಿಯವಾದ ಮಂತ್ರವೆಂದರೆ, **ಮಹಾಮೃತ್ಯುಂಜಯಮಂತ್ರ**. ಈ ಮಂತ್ರವು ವೇದೋಕ್ತವಾದ ಮಂತ್ರ. ಈ ಮಂತ್ರವನ್ನೂ ಇದರ ಅರ್ಥವನ್ನೂ ಈಗ ನೋಡೋಣ:

**ಓಂ॥ ತ್ರ್ಯಂಬಕಂ ಯಜಾಮಹೇ ಸುಗಂಧಿಂ ಪುಷ್ಟಿವರ್ಧನಮ್ ।**
**ಉರ್ವಾರುಕಮಿವ ಬಂಧನಾನ್ಮೃತ್ಯೋರ್ಮುಕ್ಷೀಯ ಮಾಮೃತಾತ್ ॥**

ಈ ಮಂತ್ರವು ಋಗ್ವೇದ ಹಾಗೂ ಯಜುರ್ವೇದಗಳಲ್ಲಿ ಕಾಣಬರುತ್ತದೆ.

**ಅನ್ವಯಾರ್ಥ: ಸುಗಂಧಿಮ್** = ಶ್ರೇಷ್ಠವಾದ ಕೀರ್ತಿಯಶಸ್ಸುಗಳಿಂದ ಕೂಡಿರುವ, **ಪುಷ್ಟಿವರ್ಧನಮ್** = ಶರೀರೇಂದ್ರಿಯ ಪ್ರಾಣ ಮನೋಬುದ್ಧಿಗಳಿಗೂ, ಇಡೀ ಸಮಸ್ತಪ್ರಪಂಚಕ್ಕೂ ಶಕ್ತಿಯನ್ನೂ ಸಾಮರ್ಥ್ಯವನ್ನೂ ಕೊಡುವಂಥ, **ತ್ರ್ಯಂಬಕಮ್** = ಸೂರ್ಯಚಂದ್ರಅಗ್ನಿಗಳೆಂಬ ಮೂರು ಕಣ್ಣುಗಳಿಂದ ಕೂಡಿರುವಂಥ ಪರಮೇಶ್ವರನನ್ನು, **ಯಜಾಮಹೇ** = ನಾವುಗಳು ಪೂಜಿಸುತ್ತೇವೆ, ಆರಾಧಿಸುತ್ತೇವೆ. **ಬಂಧನಾತ್** = ಒಣಗಿದ ತೊಟ್ಟಿನಿಂದ, **ಉರ್ವಾರುಕಮ್ ಇವ** = ಸೌತೇಕಾಯಿಯು ತಾನೇತಾನಾಗಿ ಕಳಚಿಕೊಂಡು ಬೀಳುವಂತೆ, **ಮೃತ್ಯೋಃ** = ಅಪಮೃತ್ಯುವಿನಿಂದ, **ಮುಕ್ಷೀಯ** = ನಾವುಗಳು ತಪ್ಪಿಸಿಕೊಳ್ಳುವಂತಾಗಲಿ. ಆದರೆ, **ಅಮೃತಾತ್** = ಅಮೃತವಾದ ಮೋಕ್ಷದಿಂದ, **ಮಾ ಮುಕ್ಷೀಯ** = ನಾವುಗಳು ಜಾರಿಬೀಳದಂತೆ ಆಗಲಿ.

ಈ ಮಹಾಮೃತ್ಯುಂಜಯ ಮಂತ್ರವನ್ನು ಪ್ರತಿದಿನವೂ ಪಾರಾಯಣ ಮಾಡುವುದರಿಂದ ಉಗ್ರವಾದ ರೋಗಗಳು ಪರಿಹಾರವಾಗುತ್ತವೆ. ತನ್ನ ಭಕ್ತರನ್ನು ಪರಮಶಿವನು ಅಪಮೃತ್ಯುವಿನ ಆಪತ್ತಿನಿಂದ ಬಿಡುಗಡೆಮಾಡುತ್ತಾನೆ. ಸಕಲ ಮಾನವರಿಗೂ ಇದೊಂದು ದಿವ್ಯ ಹಾಗೂ ಭವ್ಯವಾದ ಸಂಜೀವಿನೀ ಮಂತ್ರ.

# 6. ತ್ರಿಮೂರ್ತಿಗಳಲ್ಲಿ ಶಿವನ ಸ್ಥಾನ

ಸೃಷ್ಟಿ, ಸ್ಥಿತಿ ಮತ್ತು ಲಯಗಳೆಂಬುದು ಪ್ರಕೃತಿಯ ನಿಯಮ. ಯಾವುದೇ ಒಂದು ವಸ್ತು ಹುಟ್ಟಿದರೂ ಅದು ಕೆಲವು ಕಾಲವಿದ್ದು ಅನಂತರ ನಾಶವಾಗಲೇ ಬೇಕು. ಕ್ರಿಮಿಕೀಟಗಳಿಂದ ಪ್ರಾರಂಭಿಸಿ ಪಶುಪಕ್ಷಿಗಳು, ಪ್ರಾಣಿ ಜೀವರುಗಳು, ಮಾನವ ದಾನವ ದೇವತೆಗಳು—ಎಲ್ಲರಿಗೂ ಜನ್ಮ, ಸ್ಥಿತಿ, ಮರಣಗಳು ಇದ್ದೇ ಇರುತ್ತವೆ. ಚರಾಚರವಾದ, ಸ್ಥಾವರ ಜಂಗಮಾತ್ಮಕವಾದ ಇಡೀ ಪ್ರಪಂಚಕ್ಕೂ ಹೀಗೆ ಹುಟ್ಟು, ಇರವು, ನಾಶಗಳು ಇರುತ್ತವೆ.

ಈ ಮೂರೂ ಕ್ರಿಯೆಗಳನ್ನು ಕ್ರಮವಾಗಿ ಬ್ರಹ್ಮನೂ ವಿಷ್ಣುವೂ ಹಾಗೂ ಶಿವನೂ ಮಾಡುತ್ತಾರೆ—ಎಂದು ನಮ್ಮ ಪುರಾಣಗ್ರಂಥಗಳಲ್ಲಿ ತಿಳಿಸಿದ್ದಾರೆ. ಬ್ರಹ್ಮನು ಈ ವಿಶ್ವವನ್ನು ಸೃಷ್ಟಿಸುತ್ತಾನೆಂತಲೂ, ಮಹಾವಿಷ್ಣುವು ಕಾಪಾಡುತ್ತಾನೆಂದೂ, ಪರಮೇಶ್ವರನು ಈ ವಿಶ್ವವನ್ನು ಸಂಹಾರಮಾಡುತ್ತಾನೆಂದೂ ನಮ್ಮ ಶಾಸ್ತ್ರಗಳು ಸಾರುತ್ತಿವೆ. ಹೀಗೆ ಅನಾದಿಯಾಗಿ ನಡೆಯುತ್ತಲೇ ಇದೆ.

ಶಿವನನ್ನು ಸಂಹಾರಕರ್ತಾ—ಎಂದರೆ ಈ ಸುಂದರವಾದ ವಿಶ್ವವನ್ನೆಲ್ಲ ನಾಶಮಾಡುವವನು—ಎಂಬರ್ಥವನ್ನು ಮಾಡಿಕೊಳ್ಳಬಾರದು. ಸಂಹಾರ, ನಾಶ, ಮರಣ—ಈ ಶಬ್ದಗಳೇ ನಮಗೆ ಕಿರಿಕಿರಿ ಮಾಡುತ್ತವೆ. ಒಂದು ಸುಂದರವಾದ ಮಗುವನ್ನು, ಒಬ್ಬ ಧಾರ್ಮಿಕನಾದ ರಾಜನನ್ನು, ಒಬ್ಬ ಬ್ರಹ್ಮನಿಷ್ಠನಾದ ತಪಸ್ವಿಯನ್ನು, ಒಬ್ಬ ಪತಿವ್ರತೆಯಾದ ಹೆಂಗಸನ್ನು, ಒಬ್ಬ ಆದರ್ಶನಾದ ಗುರುವನ್ನು ಪರಮೇಶ್ವರನು ಸಂಹಾರಮಾಡಿಬಿಡುತ್ತಾನೆ ಎಂದು ತಪ್ಪಾಗಿ ಅರ್ಥವನ್ನೂ ಮಾಡಿಕೊಳ್ಳಬಾರದು. ಹುಟ್ಟಿದ ಪ್ರಾಣಿಯು ಎಂದಾದರೂ ಸಾಯಲೇಬೇಕಲ್ಲವೆ? ಸತ್ತ ಪ್ರಾಣಿಯು ಮತ್ತೆ ಹುಟ್ಟಲೇ ಬೇಕಲ್ಲವೆ? ಇದು ಕಾಲಚಕ್ರ.

ಈ ಜಗತ್ತಿನ ಸಂಹಾರಕಾರ್ಯಕ್ಕೆ ಪರಮಶಿವನು ನಿಮಿತ್ತನಾಗಿರುತ್ತಾನೆ ಅಷ್ಟೆ. ಅವನಿಗೆ ರಾಗದ್ವೇಷಾದಿ ದೋಷಗಳಾವುವೂ ಇರುವುದಿಲ್ಲ. ಶಿವನು ಸಂಹಾರಕನೆಂದರೆ ಒಳಗಿನ ಶತ್ರುಗಳಾದ ಕಾಮಕ್ರೋಧಲೋಭಮೋಹಮದ ಮಾತ್ಸರ್ಯಾದಿಗಳನ್ನು ನಾಶಮಾಡುವವನು ಎಂದರ್ಥ. ಮಾನವರಿಗೆ ಸಹಜವಾಗಿರುವ ಹಿಂಸೆ, ಸ್ವಾರ್ಥ, ದುರಹಂಕಾರ, ಅನೃತ ಮುಂತಾದ ದೋಷಗಳನ್ನು ದೂರಮಾಡಿ ಅಂತಃಕರಣವನ್ನು ಶುದ್ಧವನ್ನಾಗಿ ಮಾಡುವ ವೈರಾಗ್ಯಚಕ್ರವರ್ತಿ ಎಂದರೆ ಪರಮೇಶ್ವರನೇ ಅಲ್ಲವೇ? ಬಾಹ್ಯ ವಿಷಯಭೋಗಗಳಲ್ಲಿರುವ ಆಸಕ್ತಿಯನ್ನು ದೂರಮಾಡಿ ಮಾನವರನ್ನು ಮಾಧವರನ್ನಾಗಿ ಮಾಡುವ ಮಂಗಳ ದೇವತೆಯೇ ಶಿವನು. ಈ ಪ್ರಪಂಚದ ಅಸಾರತೆಯನ್ನೂ ಅನಿತ್ಯತೆಯನ್ನೂ ನಶ್ವರತ್ವವನ್ನೂ ನಮಗೆ ತೋರಿಸಿ ನಮ್ಮನ್ನು ವೇದಾಂತದ ಕಡೆಗೆ ತಿರುಗಿಸುವ ಕಾರುಣ್ಯದೇವತೆಯೆಂದರೆ ಶಿವನೇ ಎಂದು ಧಾರಾಳವಾಗಿ ಹೇಳಬಹುದಲ್ಲವೇ?

# 7. ನಂಜುಂಡೇಶ್ವರ

ಪರಮೇಶ್ವರನ ಅನಂತ ನಾಮಗಳಲ್ಲಿ "**ನಂಜುಂಡೇಶ್ವರ**"—ಎಂಬುದೂ ಒಂದು. ನಂಜುಂಡೇಶ್ವರನ ಒಕ್ಕಲು (ಭಕ್ತರುಗಳು) ಅಸಂಖ್ಯಾತರಿದ್ದಾರೆ. ನಂಜುಂಡೇಶ್ವರನ ದೇವಾಲಯಗಳೂ ಅನೇಕ ಸಂಖ್ಯೆಯಲ್ಲಿರುತ್ತವೆ. ನಮ್ಮೀ ಕರ್ನಾಟಕದಲ್ಲಿ ಸುಪ್ರಸಿದ್ಧವಾದ ನಂಜುಂಡೇಶ್ವರನ ದೇವಸ್ಥಾನವೆಂದರೆ ಮೈಸೂರಿಗೆ ಸಮೀಪದಲ್ಲಿರುವ **ನಂಜನಗೂಡಿನ**ಲ್ಲಿರುವ ದೇವಾಲಯ. ಪ್ರತೀ ಸೋಮವಾರದಂದು ಇಲ್ಲಿ ವಿಶೇಷ ಪೂಜಾದಿಗಳು ನಡೆಯುತ್ತವೆ. ಕಾರ್ತಿಕ ಮಾಸದಲ್ಲಂತೂ ಶ್ರೀನಂಜುಂಡೇಶ್ವರನಿಗೆ ವಿಶೇಷ ಸೇವೆಗಳು. ಇನ್ನು ಮಹಾಶಿವ ರಾತ್ರಿಯಂದು ಶ್ರೀನಂಜುಂಡೇಶ್ವರನ ದರ್ಶನಕ್ಕೆ ಲಕ್ಷಾಂತರ ಭಕ್ತರು ಬರುತ್ತಾರೆ.

ಸರಿ; '**ನಂಜುಂಡೇಶ್ವರ**' ಎಂದರೇನೆಂಬುದನ್ನು ಈಗ ನೋಡೋಣ:

ನಂಜು ಉಂಡ ಈಶ್ವರನೇ ನಂಜುಂಡೇಶ್ವರ. ನಂಜನ್ನು ಉಂಡು ಅದನ್ನು ಜೀರ್ಣಿಸಿಕೊಂಡ ಧೀರ ದೇವತೆಯೇ ನಂಜುಂಡೇಶ್ವರನು. ನಂಜು ಎಂದರೆ ವಿಷದ ಪ್ರಭಾವದಿಂದ ಜಗತ್ತಿನಲ್ಲಿ ತೋರಿಕೊಂಡ ಅರಿಷ್ಟ. ಈ ನಂಜನ್ನು ಕುಡಿದು ಅದನ್ನು ತನ್ನೊಳಗೇ ಕರಗಿಸಿಕೊಂಡ ಮಹಾತ್ಮನೇ ಈ ನಂಜುಂಡೇಶ್ವರ.

ಅಮೃತಪ್ರಾಪ್ತಿಗಾಗಿ ದೇವತೆಗಳೂ ಅಸುರರೂ ಸೇರಿಕೊಂಡು ಕ್ಷೀರ ಸಮುದ್ರವನ್ನು ಮಥನಮಾಡಿದರು. ವಾಸುಕಿಯನ್ನೇ ಹಗ್ಗವನ್ನಾಗಿ ಮಾಡಿಕೊಂಡು ದೇವಾಸುರರಿಬ್ಬರೂ ಸಮುದ್ರವನ್ನು ಚೆನ್ನಾಗಿ ಕಡೆದರು. ಆಗ ಪ್ರಾರಂಭದಲ್ಲಿ ಆ ಸಮುದ್ರದಿಂದ ಹೊರಹೊಮ್ಮಿದ್ದು ಭಯಂಕರವಾದ ಮೃತ್ಯುರೂಪವಾದ ಹಾಲಾಹಲ ವಿಷ. ಆ ವಿಷದ ನಂಜು ಎಲ್ಲೆಡೆಗಳಲ್ಲಿಯೂ ಗಾಳಿಯಿಂದ ಪಸರಿಸ ತೊಡಗಿತು. ಆ ನಂಜು ಮೃತ್ಯುವಿನಂತೆಯೇ ದೇವ ಮಾನವ ರಾಕ್ಷಸರನ್ನೆಲ್ಲ ನುಂಗಲು ತೊಡಗಿದಾಗ ದೇವತೆಗಳೂ ಅಸುರರೂ ದಿಕ್ಕುಕಾಣದಂತಾದರಂತೆ. ಆ ವಿಷವನ್ನು ಪಾನಮಾಡಿ, ಲೋಕವನ್ನು ಸಂರಕ್ಷಿಸುವಂತೆ ದೇವತೆಗಳು ಯಾರನ್ನು ಕೇಳಿದರೂ ಅವರಾರೂ ಒಪ್ಪಲಿಲ್ಲ. ಆಗ ಪರಮೇಶ್ವರನನ್ನು ಪ್ರಾರ್ಥಿಸಿ ಕೊಳ್ಳಲಾಗಿ ಆ ಕೂಡಲೇ ಪರಮೇಶ್ವರನು ಆ ವಿಷವನ್ನು ತಾನೇ ಸಂಪೂರ್ಣವಾಗಿ ಕುಡಿದು ಆ ನಂಜನ್ನು ಜೀರ್ಣಿಸಿಕೊಂಡು, ಆ ಭಯಂಕರವಿಷವನ್ನು ಜಗತ್ತಿನಲ್ಲಿ ಉಳಿಯದಂತೆ ಮಾಡಿ, ಜಗತ್ತಿಗೆ ನೆಮ್ಮದಿ, ಶಾಂತಿ, ಆನಂದಗಳನ್ನು ಕರುಣಿಸಿದ ನೆಂದು ಪುರಾಣಗಳು ಸಾರುತ್ತಿವೆ. ಹೀಗಾಗಿ ಕಾರುಣ್ಯಸಾಗರನಾದ ಪರಮೇಶ್ವರನು **ನಂಜುಂಡೇಶ್ವರ**ನಾದನು. ನಂಜನ್ನು ಉಂಡು **ನಂಜುಂಡ**ನಾಗಿ, ಆ ನಂಜನ್ನು ತನ್ನೊಳಗೇ ಕರಗಿಸಿಕೊಂಡು ಅದರಿಂದ ತಾನು ಸಾಯದೇ, ಮೃತ್ಯುವನ್ನು ಗೆದ್ದವನಾದ್ದರಿಂದ **ಈಶ್ವರ**ನೂ ಆಗಿ **ನಂಜುಂಡೇಶ್ವರ**ನಾದನು.

# 8. ಶಿವಪಂಚಾಕ್ಷರೀ ಮಂತ್ರ

ಶಿವನಿಗೆ ಪ್ರಿಯವಾದ ಮಂತ್ರವೆಂದರೆ **ಶಿವಪಂಚಾಕ್ಷರೀ ಮಂತ್ರ**. ಸರ್ವಮಾನವರೂ ಸದಾಕಾಲದಲ್ಲೂ ಸುಲಭವಾಗಿ ಜಪಿಸಬಹುದಾದ ಸರಳ ಮಂತ್ರ, **ಶಿವಪಂಚಾಕ್ಷರೀ ಮಂತ್ರ**. ಕಾಶಿಯಲ್ಲಿರುವ ವಿಶ್ವನಾಥನು ಶ್ರೀರಾಮ ತ್ರಯೋದಶಾಕ್ಷರೀ ಮಂತ್ರವನ್ನೂ, ರಾಮೇಶ್ವರದಲ್ಲಿರುವ ಶ್ರೀರಾಮಚಂದ್ರನು ಶಿವಪಂಚಾಕ್ಷರೀಮಂತ್ರವನ್ನೂ ತಮ್ಮ ಭಕ್ತರಿಗೆ ಉಪದೇಶಿಸುತ್ತಾರೆ—ಎಂದು ಆಸ್ತಿಕರಾದ ನಮ್ಮವರು ನಂಬುತ್ತಾರೆ.

**ಶ್ರೀರಾಮ ಜಯರಾಮ ಜಯ ಜಯ ರಾಮ**—ಎಂಬುದು ಶ್ರೀ ರಾಮ ತ್ರಯೋದಶಾಕ್ಷರೀ ಮಂತ್ರವಾದರೆ, **ನಮಃ ಶಿವಾಯ**—ಎಂಬುದೇ ಶಿವ ಪಂಚಾಕ್ಷರೀ ಮಂತ್ರವು. ಇದಕ್ಕೆ ಓಂಕಾರವನ್ನು ಸೇರಿಸಿದಾಗ '**ಓಂ ನಮಃ ಶಿವಾಯ**' ಎಂಬ ಷಡಕ್ಷರೀ ಮಂತ್ರವಾಗುತ್ತದೆ. **ನಮಃ ಶಿವಾಯ**—ಎಂದೇ ಜಪಮಾಡಿದರೂ ಸಾಕು. ಆಗ ಅದು ಪಂಚಾಕ್ಷರೀ ಮಂತ್ರವಾಗುತ್ತದೆ.

**ಶಿವಪಂಚಾಕ್ಷರೀ ಮಂತ್ರದ ಮಹಿಮೆಯು ಹೀಗಿರುತ್ತದೆ:**

1. ಶಿವಪಂಚಾಕ್ಷರೀ ಜಪದಿಂದ "**ಪಂಚಮಹಾಪಾಪಶಮನ**"ವಾಗುತ್ತದೆ. ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುಪತ್ನೀಗಮನ, ಈ ನಾಲ್ವರ ಸಹವಾಸ—ಈ ಐದು **ಪಂಚಮಹಾಪಾತಕ**ಗಳೂ ಶಮನವಾಗುತ್ತವೆ.
2. **ಪಂಚಭೂತ**ಗಳಿಗೂ ಸಂತೃಪ್ತಿಯಾಗುತ್ತದೆ. ಶಿವಪಂಚಾಕ್ಷರೀಜಪನಿಷ್ಠರಿಗೆ ಆಕಾಶಾದಿ ಪಂಚಭೂತಗಳಿಂದ ಯಾವ ತೊಂದರೆಯೂ ಆಗುವುದಿಲ್ಲ.
3. **ಪಂಚಾಂಗ**ಗಳು ಸದಾ ಶುಭವಾಗಿರುತ್ತವೆ. ತಿಥಿ, ವಾರ, ನಕ್ಷತ್ರ, ಯೋಗ, ಕರಣಗಳೆಂಬ ಪಂಚಾಂಗಗಳು ಇಂಥವನಿಗೆ ಮಂಗಳಕರವಾಗುತ್ತವೆ.
4. **ಪಂಚಜ್ಞಾನೇಂದ್ರಿಯ**ಗಳೂ **ಪಂಚಕರ್ಮೇಂದ್ರಿಯ**ಗಳೂ ಶುದ್ಧವಾಗುತ್ತವೆ. ಶಿವಪಂಚಾಕ್ಷರೀ ಜಪದಿಂದ ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ —ಎಂಬ ಐದು ಜ್ಞಾನೇಂದ್ರಿಯಗಳೂ; ವಾಕ್, ಪಾಣಿ, ಪಾದ, ಪಾಯು, ಉಪಸ್ಥಗಳೆಂಬ ಐದು ಕರ್ಮೇಂದ್ರಿಯಗಳೂ ಪಾವನಗೊಳ್ಳುತ್ತವೆ, ಪವಿತ್ರವಾಗುತ್ತವೆ, ಶುದ್ಧವಾಗುತ್ತವೆ.
5. **ಪಂಚಪ್ರಾಣ**ಗಳೂ ಶುದ್ಧವಾಗುತ್ತವೆ. ಪ್ರಾಣ, ಅಪಾನ, ವ್ಯಾನ, ಉದಾನ, ಮತ್ತು ಸಮಾನಗಳೆಂಬ ಐದೂ ಪ್ರಾಣಗಳು ಶುದ್ಧವಾಗುತ್ತವೆ.
6. **ಪಂಚಕೋಶ**ಗಳನ್ನೂ ಪಂಚಾಕ್ಷರೀಜಪದಿಂದ ದಾಟಿಹೋಗಬಹುದು. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯಗಳೆಂಬ ಐದೂ ಕೋಶಗಳನ್ನು ದಾಟಿಕೊಂಡು ಶಿವಭಕ್ತನು ಬ್ರಹ್ಮಜ್ಞಾನಿಯಾಗಿ ಶಿವಸಾಯುಜ್ಯವನ್ನೇ ಹೊಂದುತ್ತಾನೆ.

# 9. ಸ್ವಾತ್ಮಾರಾಮನಾದ ಶಿವ

'ಶಿವ' ಎಂದರೆ ಶಾಂತ, ಮಂಗಳ, ನಿತ್ಯಾನಂದಿ, ಸ್ವಸ್ಥ—ಎಂದೆಲ್ಲ ಅರ್ಥವಾಗುತ್ತದೆ. ಪರಮೇಶ್ವರನನ್ನು ಒಬ್ಬ ಕವಿಯು 'ಸ್ವಾತ್ಮಾರಾಮ' ಎಂದು ಈ ಕೆಳಗಿನ ಶ್ಲೋಕದಲ್ಲಿ ಸುಂದರವಾಗಿ ವರ್ಣಿಸಿರುತ್ತಾನೆ:

**ಭೀತಿರ್ನಾಸ್ತಿ ಭುಜಂಗಪುಂಗವವಿಷಾತ್ ಪ್ರೀತಿರ್ನ ಚಂದ್ರಾಮೃತಾತ್**
**ನೋದ್ವೇಗಶ್ಚಿತಿಭಸ್ಮನೋ ನ ಚ ಸುಖಂ ಗೌರೀಸ್ತನಾಲಿಂಗನಾತ್।**
**ನಾಶೌಚಂ ಚ ಕಪಾಲದಾಮಲುಲನಾತ್ ಶೌಚಂ ನ ಗಂಗಾಜಲಾತ್**
**ಸ್ವಾತ್ಮಾರಾಮತಯಾ ಹಿತಾಹಿತಸಮಃ ಸ್ವಸ್ಥೋ ಹರಃ ಪಾತು ನಃ॥**

ಪರಮಶಿವನು ಸ್ವಾತ್ಮಾರಾಮನಾಗಿರುವುದು ಹೇಗೆಂದರೆ:

1. **ಭೀತಿರಹಿತನು.** ತನ್ನ ಕೈಗಳಲ್ಲಿ, ಎದೆಯ ಮೇಲೆ, ತಲೆ ಕೊರಳುಗಳಲ್ಲಿ ಪರಮಶಿವನು ನಾಗರಹಾವುಗಳನ್ನು ಆಭರಣಗಳನ್ನಾಗಿ ಧರಿಸಿರುತ್ತಾನಲ್ಲವೆ? ಆ ಸರ್ಪಗಳಿಂದ ವಿಷರೂಪವಾದ ವಾಂತಿಯು ಸುರಿಯುತ್ತಾ ಇದ್ದರೂ ಈ ವಿಷದಿಂದ ಪರಮಶಿವನಿಗೆ ಮರಣದ ಭಯವೂ ಇರುವುದಿಲ್ಲ.
2. **ಪ್ರೀತಿರಹಿತನು.** ತನ್ನ ತಲೆಯ ಮೇಲೆ ಚಂದ್ರನನ್ನು ಧರಿಸಿ ಚಂದ್ರಶೇಖರನಾಗಿ, ಆ ಚಂದ್ರನಿಂದ ಸದಾ ಆನಂದದ ಅಮೃತಬಿಂದುಗಳು ತನ್ನ ಮೈಮೇಲೆ ಸುರಿಯುತ್ತಿದ್ದರೂ ಇದರಿಂದ ಶಿವನಿಗೆ ವಿಶೇಷವಾದ ಅನುರಾಗವೇನೂ ಇರುವುದಿಲ್ಲ.
3. **ಉದ್ವೇಗರಹಿತನು.** ಸ್ಮಶಾನದಲ್ಲಿ ವಾಸಮಾಡುತ್ತಾ ಅಲ್ಲಿ ಸುಟ್ಟ ಹೆಣದ ಬೂದಿಯನ್ನು ಮೈಗೆಲ್ಲ ಬಳಿದುಕೊಂಡು ಭಸ್ಮೋದ್ಧೂಳಿತಗಾತ್ರನಾಗಿದ್ದರೂ ಇದರಿಂದ ಪರಮಶಿವನಿಗೆ ಯಾವ ದುಃಖವಾಗಲೀ ಬೇಜಾರಾಗಲೀ ಇಲ್ಲ.
4. **ಸುಖರಹಿತನು.** ಪಾರ್ವತಿಯನ್ನು ಸದಾ ತನ್ನ ತೊಡೆಯಮೇಲೆ ಕೂರಿಸಿಕೊಂಡು ಅರ್ಧನಾರೀಶ್ವರನಾಗಿ ಸದಾ ಪಾರ್ವತಿಯ ಸ್ತನಗಳನ್ನು ಆಲಿಂಗಿಸಿಕೊಂಡೇ ಇದ್ದರೂ ಇದರಿಂದ ಪರಮಶಿವನಿಗೆ ಯಾವ ಸುಖಾತಿಶಯವೂ ಉಂಟಾಗುತ್ತಿಲ್ಲ.
5. **ಅಶೌಚರಹಿತನು.** ಹೆಣದ ತಲೆಬುರುಡೆಗಳನ್ನು ಮಾಲೆಯನ್ನಾಗಿ ಧರಿಸಿ ರುಂಡಮಾಲಾಧಾರಿಯಾಗಿದ್ದರೂ ಶಿವನಿಗೆ ಇದರಿಂದ ಮೈಲಿಗೆ ಎನ್ನುವುದಿಲ್ಲ.
6. **ಶೌಚರಹಿತನು.** ತನ್ನ ಜಟೆಯಲ್ಲಿ ಪವಿತ್ರವಾದ ದಿವ್ಯಗಂಗಾಮಾತೆಯನ್ನು ಧರಿಸಿ ಗಂಗಾಧರನಾಗಿದ್ದರೂ ಶಿವನಿಗೆ ಇದರಿಂದ ಶುದ್ಧಿ ಎಂಬುದಿಲ್ಲ.

ಹೀಗೆ ದ್ವಂದ್ವಾತೀತನಾದ ಪರಮಶಿವನು ಸದಾ ಸ್ವಸ್ಥನೂ ಶಿವನೂ ಸ್ವಾತ್ಮಾರಾಮನೂ ನಿರ್ವಿಕಾರಿಯೂ ಶಾಂತನೂ ಆಗಿರುತ್ತಾನಲ್ಲವೆ?

# 10. ಶಿವನು ಅಭಿಷೇಕಪ್ರಿಯನು

ಒಬ್ಬೊಬ್ಬ ದೇವತೆಗೂ ಒಂದೊಂದು ರೀತಿಯ ಆರಾಧನೆಯಿಂದ ಸಂತೋಷವಾಗುತ್ತದೆ. ಆಯಾ ದೇವತೆಗೆ ಪ್ರಿಯವಾದ ಆಯಾ ಕ್ರಮದಿಂದಲೇ ಆಯಾ ದೇವತೆಯನ್ನು ಪೂಜಿಸಿದಾಗಲೇ ಆಯಾ ದೇವತೆಗಳು ಸಂತುಷ್ಟರಾಗಿ ತಮ್ಮ ತಮ್ಮ ಭಕ್ತರುಗಳಿಗೆ ಬೇಡಿದ ವರಗಳನ್ನು ಕೊಡುತ್ತಾರೆ. ಆ ರೀತಿಯಿಂದ ಆ ದೇವತೆಗಳನ್ನು ಆರಾಧಿಸುವುದು ಶ್ರಮಸಾಧ್ಯವೂ ಹೌದು, ಆಯಾಸ ಬಾಹುಲ್ಯವೂ ಹೌದು; ಇಷ್ಟೇ ಅಲ್ಲ, ಹೆಚ್ಚಿನ ಖರ್ಚೂ ಅಲ್ಲಿ ಬೇಕಾಗುತ್ತದೆ. ಕೆಲವು ದೇವರಿಗೆ ಮಡಿಯಿಂದಲೇ ಪೂಜೆ, ಕೆಲವರಿಗೆ ಸುವರ್ಣಪುಷ್ಪದಿಂದಲೇ ಅರ್ಚನೆ, ಕೆಲವು ದೇವರಿಗೆ ಉಪವಾಸದಿಂದಲೇ ಆರಾಧನೆ, ಇನ್ನು ಕೆಲವು ದೇವರಿಗೆ ವೇದೋಕ್ತಮಂತ್ರಗಳಿಂದಲೇ ಹೋಮಹವನಾದಿಗಳಿಂದ ತೃಪ್ತಿ. ಹೀಗಾಗಿ ಎಲ್ಲ ದೇವತೆಗಳನ್ನೂ ಎಲ್ಲರೂ ಸರಿಯಾಗಿ ವಿಧಿವತ್ತಾಗಿ ಆರಾಧನೆ ಮಾಡಿ ಆ ದೇವರುಗಳನ್ನು ಸಂತೋಷಪಡಿಸಲಾಗಲಾರದು.

ಆದರೆ ಪರಮೇಶ್ವರನಿಗೆ ಈ ರೀತಿಯ ಯಾವ ನಿರ್ಬಂಧಗಳೂ ಇಲ್ಲ. ಶಿವನು ಸುಲಭ ಆರಾಧ್ಯದೇವತೆಯಾಗಿರುತ್ತಾನೆ. ಕೇವಲ ಒಂದು ಲೋಟ ನೀರನ್ನು **"ಓಂ ನಮಃ ಶಿವಾಯ"**—ಎಂದು ಜಪಿಸುತ್ತಾ ಅಭಿಷೇಕ ಮಾಡಿಬಿಟ್ಟರೆ ಅಷ್ಟರಿಂದಲೇ ಪರಮಶಿವನು ಸಂತುಷ್ಟನಾಗಿಬಿಡುತ್ತಾನೆ. ಪರಮೇಶ್ವರನ ಪೂಜೆಗೆ ಚಿನ್ನ, ಬೆಳ್ಳಿ, ರೇಷ್ಮೆವಸ್ತ್ರ, ಹಣ್ಣು, ಹಂಪಲು, ಪುರೋಹಿತರು, ಅರಮನೆ, ಮಂಟಪ, ಮಂತ್ರ, ತಂತ್ರ, ಯಂತ್ರ—ಯಾವುದೂ ವಿಶೇಷವಾಗಿ ಬೇಕಾಗಿಲ್ಲ. ನೀರಿನಿಂದ ಅಭಿಷೇಕ ಮಾಡಿಬಿಟ್ಟರೆ ಸಾಕೇ ಸಾಕು. ಭಕ್ತಿಯಿಂದ ಅಭಿಷೇಕ ಮಾಡಿದರೆ ಅಷ್ಟರಿಂದಲೇ ಶಿವನು ಒಲಿದು ವರಗಳನ್ನು ಕೊಡುತ್ತಾನೆ. ಲಿಂಗಾಕಾರದಲ್ಲಿರುವ ಶಿವನು ನಿರ್ವಿಕಾರನೂ, ನಿರ್ವಿಶೇಷನೂ, ನಿರ್ಗುಣನೂ, ನಿರಾಡಂಬರನೂ, ಸರ್ವಸಮರ್ಥನೂ, ಸರ್ವಜಗತ್ಕಾರಣನೂ ಆಗಿರುತ್ತಾನೆ. ಶಿವನ ಪೂಜೆಗೆ ಮುಖ್ಯವಾಗಿ ಬೇಕಾದದ್ದು ಭಕ್ತಿ. ಭಕ್ತಿಯಿಂದ ಒಂದು ತಂಬಿಗೆ ನೀರನ್ನು ಹಾಕಿದರೂ ಅಷ್ಟರಿಂದಲೇ ಶಿವನು ಸಂತುಷ್ಟನಾಗಿಬಿಡುತ್ತಾನೆ.

**ಅಲಂಕಾರಪ್ರಿಯೋ ವಿಷ್ಣುಃ "ಅಭಿಷೇಕಪ್ರಿಯಃ ಶಿವಃ"।**
**ನಮಸ್ಕಾರಪ್ರಿಯೋ ಭಾನುಃ ಬ್ರಾಹ್ಮಣೋ ಭೋಜನಪ್ರಿಯಃ॥**

ವಿಷ್ಣುವು ಅಲಂಕಾರಪ್ರಿಯನು, ಶಿವನು ಅಭಿಷೇಕಪ್ರಿಯನು, ಸೂರ್ಯನು ನಮಸ್ಕಾರಪ್ರಿಯನು, ಬ್ರಾಹ್ಮಣನು ಭೋಜನಪ್ರಿಯನು. ಆದ್ದರಿಂದ ಅಭಿಷೇಕ ರೂಪವಾದ ಆರಾಧನೆಯಿಂದ ಪರಮೇಶ್ವರನನ್ನು ಸುಲಭವಾಗಿ ಸಂತೋಷಗೊಳಿಸಿ ಅವನ ಕೃಪಾನುಗ್ರಹವನ್ನು ನಾವುಗಳು ಹೊಂದೋಣ.

# 11. ಶಿವನಿಗೆ ಇಷ್ಟವಾದ ಎರಡು ಮಂತ್ರಗಳು

ಶಿವನ ಪೂಜೆಯನ್ನೋ, ಅಭಿಷೇಕವನ್ನೋ, ಸ್ಮರಣೆಯನ್ನೋ ಮಾಡುವಾಗ ಅನೇಕ ವೇದೋಕ್ತಗಳಿಂದ ಮಾಡಬಹುದು. ಲಘುನ್ಯಾಸ, ಮಹಾನ್ಯಾಸಪೂರ್ವಕವಾಗಿ ನಿಧಾನವಾಗಿ ಗಂಟೆಗಳಗಟ್ಟಲೆ ಶಿವನ ಪೂಜೆಯನ್ನು ಮಾಡಬಹುದು. ಆದರೆ ಅಷ್ಟೊಂದು ದೀರ್ಘಸಮಯವು ಇಲ್ಲದಾಗ ಈ ಕೆಳಗಿನ ಎರಡು ಮಂತ್ರಗಳಿಂದ ಶಿವನಿಗೆ ಅಭಿಷೇಕವನ್ನು ಮಾಡಿದರೆ ಸಾಕೇ ಸಾಕು.

ಓಮ್ ॥ **ಸದ್ಯೋಜಾತಂ** ಪ್ರಪದ್ಯಾಮಿ ಸದ್ಯೋಜಾತಾಯ ವೈ ನಮೋ ನಮಃ। ಭವೇಭವೇನಾತಿಭವೇ ಭವಸ್ವ ಮಾಮ್ ಭವೋದ್ಭವಾಯ ನಮಃ। **ವಾಮದೇವಾಯ** ನಮೋ ಜ್ಯೇಷ್ಠಾಯ ನಮಃ ಶ್ರೇಷ್ಠಾಯ ನಮೋ ರುದ್ರಾಯ ನಮಃ ಕಾಲಾಯ ನಮಃ ಕಲವಿಕರಣಾಯ ನಮೋ ಬಲವಿಕರಣಾಯ ನಮೋ ಬಲಾಯ ನಮೋ ಬಲಪ್ರಮಥನಾಯ ನಮಃ ಸರ್ವಭೂತದಮನಾಯ ನಮೋ ಮನೋನ್ಮನಾಯ ನಮಃ। **ಅಘೋರೇಭ್ಯೋऽಥ** ಘೋರೇಭ್ಯೋ ಘೋರಘೋರತರೇಭ್ಯಃ। ಸರ್ವೇಭ್ಯಃ ಸರ್ವಶರ್ವೇಭ್ಯೋ ನಮಸ್ತೇ ಅಸ್ತು ರುದ್ರರೂಪೇಭ್ಯಃ। **ತತ್ಪುರುಷಾಯ** ವಿದ್ಮಹೇ ಮಹಾದೇವಾಯ ಧೀಮಹಿ ತನ್ನೋ ರುದ್ರಃ ಪ್ರಚೋದಯಾತ್। **ಈಶಾನಃ** ಸರ್ವವಿದ್ಯಾನಾಮ್ ಈಶ್ವರಃ ಸರ್ವಭೂತಾನಾಂ ಬ್ರಹ್ಮಾಧಿಪತಿರ್ಬ್ರಹ್ಮಣೋऽಧಿಪತಿರ್ಬ್ರಹ್ಮಾ ಶಿವೋ ಮೇ ಅಸ್ತು ಸದಾಶಿವೋಮ್ ॥

**ಪಂಚಮುಖಿ**ಪರಮೇಶ್ವರನ ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಐದು ಮುಖಗಳನ್ನು ಇಲ್ಲಿ ಸ್ತುತಿಸಿದೆ.

ಓಮ್ ॥ ನಮಸ್ತೇ ಅಸ್ತು ಭಗವನ್ ವಿಶ್ವೇಶ್ವರಾಯ ಮಹಾದೇವಾಯ ತ್ರ್ಯಂಬಕಾಯ ತ್ರಿಪುರಾಂತಕಾಯ ತ್ರಿಕಾಗ್ನಿಕಾಲಾಯ ಕಾಲಾಗ್ನಿರುದ್ರಾಯ ನೀಲಕಂಠಾಯ ಮೃತ್ಯುಂಜಯಾಯ ಸರ್ವೇಶ್ವರಾಯ ಸದಾಶಿವಾಯ ಶಂಕರಾಯ ಶ್ರೀಮನ್ಮಹಾದೇವಾಯ ನಮಃ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

## 12. ಇಂದು, ಮೂರು ಕರ್ತವ್ಯಗಳು

ಒಂದೊಂದು ದೇವರ ಹಬ್ಬಕ್ಕೂ ಒಂದೊಂದು ರೀತಿಯ ವ್ರತನಿಯಮಗಳು ಇರುತ್ತವೆ. ಹಾಗೆ ಮಾಡಿದರೆ ಮಾತ್ರವೇ ಆ ಹಬ್ಬ ಹರಿದಿನಗಳು ಸಾರ್ಥಕವಾಗಿ ಸಫಲವಾಗುತ್ತವೆ. ವರಸಿದ್ಧಿವಿನಾಯಕನಿಗೆ ಕರಿಗಡುಬು; ಶ್ರೀರಾಮನವಮೀ ಮತ್ತು ನರಸಿಂಹಜಯಂತಿಗಳಲ್ಲಿ ಪಾನಕ ಕೋಸಂಬರಿ; ಶ್ರೀಕೃಷ್ಣ ಜನ್ಮಾಷ್ಟಮಿಗೆ ಚಕ್ಕುಲಿ, ಕೋಡುಬಳೆ, ತೇಂಗೊಳಲು, ಅವಲಕ್ಕಿ, ಮೊಸರು; ಏಕಾದಶೀದಿನ ಹಣ್ಣುಹಂಪಲು; ಯುಗಾದಿ ದೀಪಾವಳಿಗಳಲ್ಲಿ ಅಭ್ಯಂಜನ ಸ್ನಾನಮಾಡಿ ಹೋಳಿಗೆ ಊಟ; ಇತ್ಯಾದಿ ಇತ್ಯಾದಿ.

ಹೀಗೆಯೇ ಶಿವರಾತ್ರಿ ಹಬ್ಬಕ್ಕೂ ಕೆಲವು ವ್ರತನಿಯಮಗಳುಂಟು. ಶಿವನ ಭಕ್ತರು ಶಿವರಾತ್ರಿಯಂದು ಈ ಕೆಳಗಿನ ಮೂರು ನಿಯಮಗಳನ್ನು ಪಾಲಿಸಬೇಕು. 1. ಶಿವಾಭಿಷೇಕಾದಿಪೂಜೆ 2. ಜಾಗರಣೆ, ಮತ್ತು 3. ಉಪವಾಸ. ಈ ಮೂರರಿಂದ ಪರಮಶಿವನು ಸಂತುಷ್ಟನಾಗಿ ತನ್ನ ಭಕ್ತರಿಗೆ ವರಪ್ರದನಾಗುತ್ತಾನೆ. ಈ ಮೂರು ನಿಯಮಗಳ ಅರ್ಥವನ್ನೀಗ ನೋಡೋಣ:

1. **ಶಿವಪೂಜಾ**. ಶಿವಾಲಯಗಳಿಗೆ ಹೋಗಿ ಅಥವಾ ತಮ್ಮ ಮನೆ ಯಲ್ಲಿಯೇ ಶಿವಲಿಂಗವನ್ನು ಇಟ್ಟುಕೊಂಡು ಅದಕ್ಕೆ ಅಭಿಷೇಕ, ಅಷ್ಟೋತ್ತರ, ಸಹಸ್ರನಾಮ ಪೂಜೆಯನ್ನು ಯಥಾಶಕ್ತಿ ಮಾಡಬಹುದು. ಬಿಲ್ವದಳಗಳಿಂದ ಪೂಜಿಸಿದರೆ ತುಂಬಾ ಶ್ರೇಷ್ಠ. ಶಿವರಾತ್ರಿಯಂದು ಸಾಯಂಕಾಲ 6 ಗಂಟೆಯಿಂದ ಪ್ರಾರಂಭಿಸಿ ಮಾರನೆಯ ದಿವಸ ಬೆಳಗ್ಗೆ 6 ಗಂಟೆಯವರೆಗೂ ನಾಲ್ಕೂ ಜಾವಗಳಲ್ಲಿ ಶಿವನಪೂಜೆಯನ್ನು ಮಾಡಬೇಕು.

2. **ಜಾಗರಣೆ**. ಇಂದು ರಾತ್ರಿಯೆಲ್ಲ ಶಿವನನ್ನು ಪೂಜಿಸುತ್ತಾ ಶಿವ ಪಂಚಾಕ್ಷರೀ ಮಂತ್ರವನ್ನು ಜಪಿಸುತ್ತಾ, ಶಿವನ ಧ್ಯಾನದಲ್ಲಿಯೇ ಮಗ್ನರಾಗಿರ ಬೇಕು. ಇಂದು ರಾತ್ರಿ ಮಲಗಬಾರದು. ನಿದ್ರೆಯನ್ನು ತಡೆಯುವುದಕ್ಕಾಗಿ ಸಿನಿಮಾಮಂದಿರಗಳಿಗೆ ಖಂಡಿತಾ ಹೋಗಬಾರದು. ಪರಮೇಶ್ವರನ ಪೂಜೆ ಯನ್ನು ಮಾಡುತ್ತಾ ಇದ್ದರೆ ನಿದ್ರೆಯು ಬರುವುದೇ ಇಲ್ಲ.

3. **ಉಪವಾಸ**. ಶಿವರಾತ್ರಿಯ ದಿನದಂದು ಮುಸುರೆಯನ್ನಾಗಲೀ ಬೇಯಿಸಿದ ಆಹಾರಗಳನ್ನಾಗಲೀ ತಿನ್ನಬಾರದು. ಕೇವಲ ಹಾಲು ಹಣ್ಣುಗಳನ್ನು ಮಾತ್ರ ಲಘುವಾಗಿ ಸ್ವೀಕರಿಸಬೇಕು. ಶಕ್ತಿ ಸಾಮರ್ಥ್ಯಗಳಿದ್ದರೆ ಇದನ್ನೂ ತೆಗೆದು ಕೊಳ್ಳದೇ ಕೇವಲ ನೀರನ್ನು ಕುಡಿದುಕೊಂಡೇ ಇರಬೇಕು. ಹೀಗೆ ಉಪವಾಸ ವಿದ್ದು, ರಾತ್ರಿಯೆಲ್ಲಾ ಜಾಗರಣೆ ಮಾಡುತ್ತಾ ಶಿವನಿಗೆ ಅಭಿಷೇಕ ಅಷ್ಟೋತ್ತರ ಪೂಜೆಗಳನ್ನು ಮಾಡಿದಾಗ ಅದು **ಅನ್ವರ್ಥ ಶಿವರಾತ್ರಿ**ಯಾಗುತ್ತದೆ.

# 13. ಕಾಳಿದಾಸ ಕಂಡ ಶಿವ

ಕಾಳಿದಾಸನು ರಾಷ್ಟ್ರಕವಿ, ಮಹಾಕವಿ ಹಾಗೂ ಕವಿಸಮ್ರಾಟ್. ಇವನು ಈಶ್ವರನ ಪರಮಭಕ್ತ. ಕಾಳಿದಾಸನು ತನ್ನ ಗ್ರಂಥಗಳಲ್ಲಿ ಪರಮೇಶ್ವರನನ್ನು ತುಂಬಾ ಸ್ತುತಿಸಿರುತ್ತಾನೆ. ಕಾಳಿದಾಸನ '**ಮಾಲವಿಕಾಗ್ನಿಮಿತ್ರ**' ಎಂಬ ನಾಟಕದ ಪ್ರಾರಂಭದ ಮಂಗಳಶ್ಲೋಕವು ಹೀಗಿದೆ:

**ಏಕೈಶ್ವರ್ಯೇ ಸ್ಥಿತೋಽಪಿ ಪ್ರಣತಬಹುಫಲೇ ಯಃ ಸ್ವಯಂ ಕೃತ್ತಿವಾಸಾಃ**
**ಕಾಂತಾಸಂಮಿಶ್ರದೇಹೋಽಪ್ಯವಿಷಯಮನಸಾಂ ಯಃ ಪರಸ್ತಾದ್ಯತೀನಾಮ್।**
**ಅಷ್ಟಾಭಿರ್ಯಸ್ಯ ಕೃತ್ಸ್ನಂ ಜಗದಪಿ ತನುಭಿರ್ಬಿಭ್ರತೋ ನಾಭಿಮಾನಃ**
**ಸನ್ಮಾರ್ಗಾಲೋಕನಾಯ ವ್ಯಪನಯತು ಸ ವಸ್ತಾಮಸೀಂ ವೃತ್ತಿಮೀಶಃ॥**

**ತಾತ್ಪರ್ಯಾರ್ಥ**: ಪರಮೇಶ್ವರನು ಅಷ್ಟೈಶ್ವರ್ಯಗಳಿಗೂ ಒಡೆಯನಾಗಿದ್ದು ತನ್ನ ಭಕ್ತರುಗಳಿಗೆ ಬೇಡಿದ ವರಗಳನ್ನೆಲ್ಲ ಕೊಡಬಲ್ಲ ಸರ್ವಸಮರ್ಥದೇವನು. ಆದರೆ ಶಿವನು ತಾನು ಮಾತ್ರ ಗಜಚರ್ಮಧಾರಿಯಾಗಿದ್ದಾನೆ. ಪಾರ್ವತಿಯೊಂದಿಗೆ ತನ್ನ ದೇಹವನ್ನು ಸೇರಿಸಿಕೊಂಡು ಅರ್ಧನಾರೀಶ್ವರನಾಗಿ ಮೆರೆಯುತ್ತಿದ್ದರೂ ಶಿವನು ವಿಷಯಭೋಗಗಳಿಂದ ವಿರಕ್ತರಾದ ಸಂನ್ಯಾಸಿಗಳಿಗೂ ನಿಲುಕದಿರುವಂಥವನು. ತನ್ನ ಎಂಟು ಮೂರ್ತಿಗಳಿಂದ ಇಡೀ ವಿಶ್ವವನ್ನೇ ತುಂಬಿಕೊಂಡು ಇಡೀ ಜಗತ್ತಿಗೇ ಆಧಾರವಾಗಿದ್ದರೂ ಆ ಶಿವನಿಗೆ ಮಾತ್ರ ಸ್ವಲ್ಪವೂ ಅಭಿಮಾನವಿಲ್ಲ. ಇಂಥ ಈಶ್ವರನು ಲೋಕದ ತಮೋಗುಣವನ್ನು ದೂರಮಾಡಿ ಜನಗಳಿಗೆ ಆತ್ಮಜ್ಞಾನದ ಸನ್ಮಾರ್ಗದ ಬೆಳಕನ್ನು ಕರುಣಿಸಲಿ.

ಈ ಶ್ಲೋಕದಲ್ಲಿ ಶಿವನ ಹತ್ತು ಮಹಿಮೆಗಳನ್ನು ತಿಳಿಸಲಾಗಿದೆ:

1. ಈಶ್ವರನು ಸಕಲಸಂಪತ್ತುಗಳಿಗೂ ಏಕೈಕ ಪ್ರಭುವಾಗಿರುತ್ತಾನೆ.
2. ತನ್ನ ಭಕ್ತರಿಗೆ ಬೇಡಿದ ಸಕಲವರಗಳನ್ನೂ ಕೊಡಬಲ್ಲ ಪ್ರಭು.
3. ತಾನು ಮಾತ್ರ ಗಜಚರ್ಮಾಂಬರಧಾರಿಯಾಗಿ ವಿರಕ್ತನಾಗಿರುತ್ತಾನೆ.
4. ಅರ್ಧನಾರೀಶ್ವರನಾಗಿ ಶಕ್ತಿಶಕ್ತಗಳಿಗೆ ಅಭಿನ್ನನಾಗಿರುತ್ತಾನೆ.
5. ಅಂತರಂಗದಲ್ಲಿ ಮಾತ್ರ ಶಿವನು ಸಂನ್ಯಾಸಿಪುಂಗವನಾಗಿದ್ದಾನೆ.
6. ಸರ್ವಜಗತ್ತಿಗೂ ಶಿವನೊಬ್ಬನೇ ಆಧಾರನಾಗಿರುತ್ತಾನೆ.
7. ಪಂಚಭೂತಗಳು, ಸೂರ್ಯ, ಚಂದ್ರ, ಪ್ರಜಾಪತಿಯಾಗಿರುತ್ತಾನೆ.
8. ಅಹಂಕಾರ ಅಭಿಮಾನರಹಿತನಾಗಿ ಶಾಂತನಾಗಿರುತ್ತಾನೆ.
9. ಅಧ್ಯಾತ್ಮಸಾಧಕರಿಗೆ ವಿವೇಕವೈರಾಗ್ಯದಹಾದಿಯಲ್ಲಿ ದಾರಿದೀಪವಾಗಿರುತ್ತಾನೆ.
10. ಭಕ್ತರ ಅಜ್ಞಾನಾಂಧಕಾರವನ್ನು ನಾಶಪಡಿಸುತ್ತಾನೆ.

ಕವಿರತ್ನ ಕಾಳಿದಾಸನು ಶಿವನನ್ನು ಹೀಗೆ ವರ್ಣಿಸಿರುತ್ತಾನೆ.

# 14. ಚತುರ್ದಶೀ ತಿಥಿಯ ರಹಸ್ಯ

ಶಿವನನ್ನು ಪೂಜಿಸಲು ಕೃಷ್ಣಪಕ್ಷದ ಚತುರ್ದಶೀ ತಿಥಿಯು ಪ್ರಶಸ್ತವಾದದ್ದು. ಪ್ರತೀಮಾಸದಲ್ಲೂ ಈ ತಿಥಿಯಂದು ಶಿವನನ್ನು ಪೂಜಿಸುವುದು ಶ್ರೇಯಸ್ಕರ. ಆಗ ಅದು **ಮಾಸಶಿವರಾತ್ರಿ** ಎನಿಸುತ್ತದೆ. ಮಾಘ ಶುಕ್ಲ ಚತುರ್ದಶಿಯಂದು **ಮಹಾ ಶಿವರಾತ್ರಿ**—ಎಂದು ಪ್ರಸಿದ್ಧವಾಗಿರುತ್ತದೆ. ಅಂತೂ ಪರಮಶಿವನ ಪೂಜೆಗೆ **ಚತುರ್ದಶೀ** ತಿಥಿಯು ಅತ್ಯಂತ ಶ್ರೇಷ್ಠವಾದದ್ದು ಎಂದು ಪ್ರಸಿದ್ಧಿ. ಇದರ ರಹಸ್ಯಾರ್ಥವನ್ನೀಗ ನೋಡೋಣ.

ಚತುರ್ದಶೀ ಎಂದರೆ ಹದಿನಾಲ್ಕು ಎಂದರ್ಥ. ಹದಿನಾಲ್ಕು ಇಂದ್ರಿಯ ಗಳನ್ನೂ ಜಯಿಸಿರುವ ಶಿವನನ್ನು ಚತುರ್ದಶಿಯಂದು ಪೂಜಿಸಬೇಕಲ್ಲವೆ? ಹಾಗೂ ಹದಿನಾಲ್ಕು ಲೋಕಗಳಿಗೂ ಪ್ರಭುವಾಗಿರುವ ಪರಮೇಶ್ವರನನ್ನು ಚತುರ್ದಶೀ ದಿನದಂದು ವಿಶೇಷವಾಗಿ ಪೂಜಿಸುವುದು ಯುಕ್ತವೇ ಆಗಿದೆ.

**ಶಿವನು ಚತುರ್ದಶೇಂದ್ರಿಯವಿಜಯೀ;** ಹೇಗೆಂದರೆ:

1. **ನೇತ್ರೇಂದ್ರಿಯ**. ಬಾಹ್ಯವಿಷಯಗಳಿಂದ ತನ್ನ ಕಣ್ಣುಗಳನ್ನು ಒಳಗಡೆಗೆ ಸರಿಸಿಕೊಂಡು ಆತ್ಮನಲ್ಲಿಯೇ ನೆಲೆಗೊಳಿಸಿದ್ದ ಧೀರದೇವತೆಯೇ ಶಿವ.
2. **ಶ್ರೋತ್ರೇಂದ್ರಿಯ**. ಪ್ರಾಕೃತ ಶಬ್ದಗಳನ್ನು ಕೇಳದೇ ಸದಾ ಓಂಕಾರನಾದ ವನ್ನೇ ಶ್ರವಣಮಾಡುತ್ತಿದ್ದ ಅಂತರ್ಮುಖಿಯೇ ಶಿವ.
3. **ಘ್ರಾಣೇಂದ್ರಿಯ**. ಅನಾತ್ಮವಸ್ತುಗಳ ಗಂಧದಿಂದ ದೂರವಿದ್ದವನು.
4. **ಜಿಹ್ವೇಂದ್ರಿಯ**. ರುಚಿಯನ್ನು ಗೆದ್ದ ಧೀಮಂತನೇ ಶಿವ.
5. **ಚರ್ಮೇಂದ್ರಿಯ**. ಗಜಚರ್ಮಧಾರಿಯಾಗಿ ಸ್ಪರ್ಶಸುಖದಿಂದ ದೂರವಿದ್ದ ತಪೋಮೂರ್ತಿಯೇ ಪರಮಶಿವ.
6. **ವಾಗಿಂದ್ರಿಯ**. ಮೌನಿಯಾಗಿ ನಾಲಿಗೆಯನ್ನು ಗೆದ್ದವನು ಶಿವ.
7. **ಪಾಣೀಂದ್ರಿಯ**. ಹಸ್ತಗಳ ಚಾಪಲ್ಯರಹಿತನಾಗಿ ಶಾಂತನಾಗಿರುವವನು.
8. **ಪಾದೇಂದ್ರಿಯ**. ಎಲ್ಲೂ ಚಲಿಸದೇ ಕೂಟಸ್ಥನಾಗಿರುವ ತಪಸ್ವಿಯಿವನು.
9. **ಪಾಯುಇಂದ್ರಿಯ,** 10. **ಉಪಸ್ಥೇಂದ್ರಿಯ**. ತಪಸ್ಸಿನಲ್ಲಿ ನಿಷ್ಠನಾದ ಪರಮೇಶ್ವರನು ವಿವೇಕವೈರಾಗ್ಯಗಳಿಂದ ಕಾಮಲೀಲೆಗಳನ್ನು ಗೆದ್ದ ಧೀರನು.
11. **ಮನಸ್ಸು**. ಆತ್ಮನಿಷ್ಠನಾಗಿ ಮನಶ್ಚಾಂಚಲ್ಯವನ್ನು ಗೆದ್ದವನು.
12. **ಬುದ್ಧಿ**. ತನ್ನಲ್ಲಿಯೇ ತನ್ನ ಬುದ್ಧಿಯನ್ನು ಇಟ್ಟುಕೊಂಡಿರುವವನು.
13. **ಚಿತ್ತ**. ಚಿತ್ತವೃತ್ತಿಗಳನ್ನೆಲ್ಲ ನಾಶಮಾಡಿಕೊಂಡಿರುವವನು.
14. **ಅಹಂಕಾರ**. ಅಹಂಕಾರಾಸುರನನ್ನು ಭಸ್ಮಮಾಡಿದ ಧೀರ.

ಹೀಗೆ ಚತುರ್ದಶೇಂದ್ರಿಯಗಳನ್ನು ಜಯಿಸಿದ ತಿಥಿಯೇ **ಚತುರ್ದಶೀತಿಥಿ**.

# 15. ನಮಕ ಮತ್ತು ಚಮಕಗಳು

ವೇದೋಕ್ತ ದೇವತೆಯಾದ ಪರಮಶಿವನನ್ನು ಅಧಿಕಾರಿಗಳಾದವರು ವೇದೋಕ್ತ ಮಂತ್ರಗಳಿಂದ ಪೂಜಿಸಬಹುದು. ಪರಮಶಿವನಿಗೆ 'ರುದ್ರ' ಎಂದೂ ಹೆಸರಿದೆ. **ರುದಂ ದುಃಖಂ ದ್ರಾವಯತಿ ನಾಶಯತಿ ಇತಿ ರುದ್ರಃ** ; ಸಕಲ ಸಂಕಟಗಳನ್ನೂ ನಾಶಮಾಡುವುದರಿಂದ ಶಿವನಿಗೆ 'ರುದ್ರ' ಎಂಬ ಹೆಸರು ಬಂದಿರುತ್ತದೆ. ರುದ್ರಹೋಮ, ರುದ್ರಜಪ, ರುದ್ರಾಭಿಷೇಕ, ರುದ್ರಪೂಜಾ, ರುದ್ರಕ್ರಮಾರ್ಚನೆ ಮುಂತಾದ ರುದ್ರಾರಾಧನೆಗಳಿಗೆಲ್ಲ **ನಮಕ** ಮತ್ತು **ಚಮಕ** ಮಂತ್ರಗಳನ್ನು ವಿನಿಯೋಗಿಸುವುದು ಸಂಪ್ರದಾಯದಲ್ಲಿರುತ್ತದೆ. ರುದ್ರೈಕಾದಶಿನೀ, ಶತರುದ್ರ, ಮಹಾರುದ್ರ, ಅತಿರುದ್ರಗಳೆಂದು ಸುಪ್ರಸಿದ್ಧವಾಗಿವೆಯಲ್ಲವೆ? ಹೀಗೆ ರುದ್ರಾಧ್ಯಾಯಕ್ಕೇ **ನಮಕಾಧ್ಯಾಯ**ವೆಂದೂ ಹೆಸರು.

ಈಗಿನ ಗಣಕಯಂತ್ರದ ವಿಜ್ಞಾನಯುಗದಲ್ಲಿಯೂ ಲಕ್ಷಾಂತರ ಜನರು ಈ **ನಮಕ ಚಮಕ** ಮಂತ್ರಗಳನ್ನು ಕಲಿಯುತ್ತಾರೆ, ಕಲಿಸುತ್ತಾರೆ, ಕಲಿತಿರುತ್ತಾರೆ, ಪಠಿಸುತ್ತಾರೆ, ಪಾರಾಯಣ ಮಾಡುತ್ತಾರೆ. ಈ ರುದ್ರಮಂತ್ರಗಳಿಂದ ಅಭಿಷೇಕ, ಹೋಮ, ಪೂಜೆಗಳನ್ನೂ ಭಕ್ತರು ಮಾಡುತ್ತಾರೆ. ಶಿವಮಂದಿರಗಳಲ್ಲಂತೂ ಈ **ನಮಕ ಚಮಕ**ಮಂತ್ರಗಳ ಪಾರಾಯಣವು ನಡೆದೇ ನಡೆಯುತ್ತದೆ. ಧ್ವನಿಸುರುಳಿ ಹಾಗೂ ಸಿ.ಡಿ.ಗಳಲ್ಲಿಯೂ ಈ **ನಮಕ ಚಮಕ**ಮಂತ್ರಗಳು ದೊರಕುತ್ತವೆ. ಈ ಮಂತ್ರಗಳನ್ನು ಕೇಳುವುದೇ ಒಂದು ರೀತಿಯ ಆನಂದ. ಇನ್ನು ಸ್ವರಸಹಿತವಾಗಿ ಈ ಮಂತ್ರಗಳನ್ನು ನೂರಾರು ಜನಗಳು ಜೊತೆಯಲ್ಲಿ ಸೇರಿಕೊಂಡು ಏಕಕಂಠದಿಂದ ಪಾರಾಯಣಮಾಡುತ್ತಿದ್ದರಂತೂ ಅದನ್ನು ನೋಡುವುದೇ ಆನಂದ. ಆ **ನಮಕ ಚಮಕ**ಮಂತ್ರಗಳ ಪರಿಚಯವನ್ನು ಈಗ ನೋಡೋಣ.

**ಓಂ ನಮೋ ಭಗವತೇ ರುದ್ರಾಯ। ಓಂ ನಮಸ್ತೇ ರುದ್ರ ಮನ್ಯವ ಉತೋತ ಇಷವೇ ನಮಃ**—ಎಂದು **ನಮಕ**ಮಂತ್ರಗಳು ಪ್ರಾರಂಭವಾಗುತ್ತವೆ. ನಮಃ, ನಮಃ, ನಮಃ, ನಮಃ ಎಂದು ನೂರಾರು ಬಾರಿ ಬಂದಿರುವುದರಿಂದ ಈ ರುದ್ರಾಧ್ಯಾಯಕ್ಕೆ **ನಮಕಪ್ರಶ್ನ** ಎಂದೇ ಹೆಸರಾಗಿರುತ್ತದೆ. ನಮೋ ಭಗವತೇ, ನಮಸ್ತೇ ಎಂದು ಪ್ರಾರಂಭಗೊಂಡಿರುವುದರಿಂದಲೂ ಇದು **ನಮಕ**ವಾಗಿರುತ್ತದೆ. ಹನ್ನೆರಡು ಅನುವಾಕಗಳಲ್ಲಿ ಈ **ನಮಕಪ್ರಶ್ನವು** ಪ್ರೋಕ್ತವಾಗಿರುತ್ತದೆ. ಇನ್ನು **ಚಮಕ** ವೆಂದರೆ ಚ ಮೇ, ಚ ಮೇ, ಚ ಮೇ ಎಂದು ಅನೇಕ ಸಲ ಬಂದಿರುವ ಮಂತ್ರಭಾಗ. **ನಮಃ** ಎಂದು ಪಾರಾಯಣ ಮಾಡಿದಾಗ ಆ ಶಿವನು ಸಂತುಷ್ಟನಾಗುತ್ತಾನೆ. ಅನಂತರ ಅವನನ್ನು ಭಕ್ತರು **ಚ ಮೇ** ಇದನ್ನು ನನಗೆ ಕೊಡು, ಇದನ್ನೂ ನನಗೆ ಕರುಣಿಸು—ಎಂದು ಪ್ರಾರ್ಥಿಸುತ್ತಾರೆ. ಈ **ಚಮಕ**ದಲ್ಲಿ ಹನ್ನೆರಡು ಅನುವಾಕಗಳಿವೆ. **ನಮಕ ಚಮಕ**ಗಳು ಶಿವನಿಗೆ ಪ್ರಿಯವಾದವುಗಳು.

## 16. ಶಿವಶಿವೆಯರ ಷೋಡಶನಾಮಾವಳಿ

ಅಥರ್ವವೇದದ ಪ್ರಶ್ನೋಪನಿಷತ್ತಿನಲ್ಲಿ ಹದಿನಾರು ಕಲೆಗಳನ್ನು ತಿಳಿಸಿದೆ. ಆ ಹದಿನಾರು ಕಲೆಗಳೂ ಆತ್ಮನಿಂದಲೇ ಹುಟ್ಟಿ, ಆತ್ಮನಲ್ಲಿಯೇ ಇದ್ದು, ಆತ್ಮನಲ್ಲಿಯೇ ಪ್ರಲಯವಾಗುತ್ತವೆ. ಆ ಆತ್ಮನಿಗೇ ಪುರುಷ ಎಂದು ಹೆಸರು. ಆ ಪುರುಷನು ನಮ್ಮೊಳಗೇ ಇದ್ದಾನೆ—ಎಂದು ಪ್ರಶ್ನೋಪನಿಷತ್ತು ತಿಳಿಸುತ್ತಿದೆ. ಆ **ಷೋಡಶಕಲಪುರುಷನೇ ಪರಮಶಿವನು**. ಈಶ್ವರನೇ ಶಕ್ತ, ಪಾರ್ವತಿಯೇ ಶಕ್ತಿ. ಇಬ್ಬರಿಗೂ ಅಭೇದವನ್ನು ಶಾಸ್ತ್ರಗಳಲ್ಲಿ ತಿಳಿಸಿದೆ. ಪರಮಶಿವನಿಗೆ ಅತ್ಯಂತ ಪ್ರಿಯವಾದ ಷೋಡಶನಾಮಗಳಿರುತ್ತವೆ. ಈ ಹದಿನಾರು ನಾಮಗಳಿಂದ ಈಶ್ವರನನ್ನು ಪೂಜಿಸುವುದು ಅತ್ಯಂತ ಪ್ರಶಸ್ತವಾದದ್ದು.

**ಶಿವನಿಗೆ ಪ್ರಿಯವಾದ ಷೋಡಶನಾಮಾವಳಿ**

1. ಓಂ ಭವಾಯ ದೇವಾಯ ನಮಃ
2. ಓಂ ಶರ್ವಾಯ ದೇವಾಯ ನಮಃ
3. ಓಂ ಈಶಾನಾಯ ದೇವಾಯ ನಮಃ
4. ಓಂ ಪಶುಪತಯೇ ದೇವಾಯ ನಮಃ
5. ಓಂ ರುದ್ರಾಯ ದೇವಾಯ ನಮಃ
6. ಓಂ ಉಗ್ರಾಯ ದೇವಾಯ ನಮಃ
7. ಓಂ ಭೀಮಾಯ ದೇವಾಯ ನಮಃ
8. ಓಂ ಮಹತೇ ದೇವಾಯ ನಮಃ
9. ಓಂ ಭವಸ್ಯ ದೇವಸ್ಯ ಪತ್ನ್ಯೈ ನಮಃ
10. ಓಂ ಶರ್ವಸ್ಯ ದೇವಸ್ಯ ಪತ್ನ್ಯೈ ನಮಃ
11. ಓಂ ಈಶಾನಸ್ಯ ದೇವಸ್ಯ ಪತ್ನ್ಯೈ ನಮಃ
12. ಓಂ ಪಶುಪತೇರ್ದೇವಸ್ಯ ಪತ್ನ್ಯೈ ನಮಃ
13. ಓಂ ರುದ್ರಸ್ಯ ದೇವಸ್ಯ ಪತ್ನ್ಯೈ ನಮಃ
14. ಓಂ ಉಗ್ರಸ್ಯ ದೇವಸ್ಯ ಪತ್ನ್ಯೈ ನಮಃ
15. ಓಂ ಭೀಮಸ್ಯ ದೇವಸ್ಯ ಪತ್ನ್ಯೈ ನಮಃ
16. ಓಂ ಮಹತೋ ದೇವಸ್ಯ ಪತ್ನ್ಯೈ ನಮಃ

ಇತಿ ಷೋಡಶನಾಮಾವಳಿಪೂಜಾಂ ಸಮರ್ಪಯಾಮಿ।

ಓಂ ಭವಂ ದೇವಂ ತರ್ಪಯಾಮಿ, ಓಂ ಶರ್ವಂ ದೇವಂ ತರ್ಪಯಾಮಿ—ಎಂದು ಮುಂತಾಗಿ ಈ ಹದಿನಾರು ನಾಮಗಳಿಂದ ಶಿವನಿಗೂ ಪಾರ್ವತಿಗೂ ತರ್ಪಣವನ್ನೂ ಕೊಡಬಹುದು.

# 17. ವೇದಾಂತದಲ್ಲಿ 'ಶಿವ'

ಶಿವನು ಸಾಕಾರನೂ ಹೌದು, ನಿರಾಕಾರನೂ ಹೌದು; ಶಿವನು ಗೃಹಸ್ಥನೂ ಹೌದು, ಬ್ರಹ್ಮಚಾರಿಯೂ ಹೌದು; ಶಿವನು ಪುರಾಣಗಳಲ್ಲಿ ಪ್ರತಿಪಾದಿಸಲ್ಪಟ್ಟ ಒಬ್ಬ ಸವಿಶೇಷ ಸಗುಣದೇವರೂ ಹೌದು, ವೇದಾಂತಪ್ರತಿಪಾದ್ಯನಾದ ನಿರ್ವಿಶೇಷ ನಿರ್ಗುಣ ಪರಬ್ರಹ್ಮವೂ ಹೌದು; ಭಕ್ತರಿಂದ ಆರಾಧಿಸಲ್ಪಡುವ ಉಪಾಸ್ಯದೇವತೆಯೂ ಹೌದು, ವಿರಕ್ತರಾದ ಯತಿಪುಂಗವರಾದ ಮುಮುಕ್ಷು ಗಳಿಂದ ತಮ್ಮ ಆತ್ಮನೆಂದೇ ತಿಳಿಯಲ್ಪಡುವ ಪರಬ್ರಹ್ಮವೆಂಬ ಜ್ಞೇಯವೂ ಹೌದು. ಇದೀಗ ವೇದಾಂತಗಳಲ್ಲಿ ಪ್ರತಿಪಾದಿತನಾದ ಶಿವನ ಸ್ವರೂಪವನ್ನು ನೋಡೋಣ:

ಅಥರ್ವವೇದದ ಮಾಂಡೂಕ್ಯೋಪನಿಷತ್ತು ಅವಸ್ಥಾತ್ರಯದ ವಿಮರ್ಶೆಯ ಮೂಲಕ ನಿರ್ವಿಶೇಷನಾದ ಪ್ರತ್ಯಗಾತ್ಮನ ಸ್ವರೂಪವನ್ನು ತಿಳಿಸಿರುತ್ತದೆ. ಒಬ್ಬನೇ ಪರಿಪೂರ್ಣ ಆತ್ಮನನ್ನು **ವೈಶ್ವಾನರ, ತೈಜಸ** ಮತ್ತು **ಪ್ರಾಜ್ಞ**ರೆಂದು ತಿಳಿಸಿ, ಈ ಮೂರನ್ನೂ ಮೀರಿರುವ **ತುರೀಯ** ಸ್ವರೂಪವನ್ನು ಈ ಮಾಂಡೂಕ್ಯೋಪ ನಿಷತ್ತಿನಲ್ಲಿ ಸುಂದರವಾಗಿ ತಿಳಿಸಿದೆ. **ತುರೀಯ ಆತ್ಮನೆಂದರೆ ಪರಬ್ರಹ್ಮವೇ.** ಪರಬ್ರಹ್ಮವು ನಿರ್ವಿಶೇಷವೂ ಪ್ರಪಂಚೋಪಶಮವೂ ಆಗಿರುತ್ತದೆ. ತುರೀಯ ಆತ್ಮನನ್ನು ಅಲ್ಲಿ ಹೀಗೆ ತಿಳಿಸಿರುತ್ತದೆ:

**ನಾಂತಃಪ್ರಾಜ್ಞಂ, ನ ಬಹಿಷ್ಪ್ರಜ್ಞಂ ....ಪ್ರಪಂಚೋಪಶಮಂ ಶಾಂತಂ**
**ಶಿವಮ್ ಅದ್ವೈತಂ ಚತುರ್ಥಂ ಮನ್ಯಂತೇ ಸ ಆತ್ಮಾ ಸ ವಿಜ್ಞೇಯಃ॥**

ಮಾಂಡೂಕ್ಯೋಪನಿಷತ್ ೭ನೇ ಮಂತ್ರ

ಇಲ್ಲಿ ಆತ್ಮನನ್ನು ಪ್ರಪಂಚೋಪಶಮ, ಶಾಂತ, ಶಿವ, ಅದ್ವೈತ—ಎಂದು ವರ್ಣಿಸಿರುವುದನ್ನು ಗಮನವಿಟ್ಟು ನೋಡಬೇಕು. ಶಿವ, ಭದ್ರ, ಶುಭ, ಕಲ್ಯಾಣ, ಮಂಗಳ, ಶ್ರೇಯಸ್—ಇವೆಲ್ಲವೂ ಪರ್ಯಾಯಪದಗಳು.

ಈ ಉಪನಿಷತ್ತಿನಲ್ಲಿ ಪ್ರತಿಪಾದಿತನಾಗಿರುವ ಈ **ಶಿವನು** ಗಂಡಲ್ಲ, ಬ್ರಹ್ಮಚಾರಿಯಲ್ಲ , ಗೃಹಸ್ಥನೂ ಅಲ್ಲ, ಪಾರ್ವತೀಶನೂ ಅಲ್ಲ; ಮತ್ತೇನೆಂದರೆ ಅವಸ್ಥಾತ್ರಯರಹಿತವಾಗಿರುವ, ಪ್ರಪಂಚೋಪಶಮವಾದ, ಮಂಗಳಕರವಾದ ಅದ್ವಿತೀಯವಾದ ಪರಬ್ರಹ್ಮತತ್ತ್ವವೇ ಶಿವನು. ಇದಕ್ಕೇ **ತುರೀಯ** ಎಂದೂ ಹೆಸರು. ಇದೇ ಪರಬ್ರಹ್ಮತತ್ತ್ವ, ಇದೇ ಮೋಕ್ಷಸ್ವರೂಪವೂ ಹೌದು. ಈ ಶಿವನನ್ನು **ವಸ್ತುತಂತ್ರ ವಿಚಾರಮಾರ್ಗದಿಂದ** ತಿಳಿದುಕೊಳ್ಳಬೇಕು. ಅದ್ವಿತೀಯ ನಾದ ಈ **ಮಂಗಳಶಿವನೇ** ತಾನೆಂದು ತಿಳಿಯಬೇಕು. ಸಕಲ ಚರಾಚರ ಪ್ರಾಣಿಗಳಿಗೂ ಈ ಶಿವನೇ ಆತ್ಮನೂ ಸ್ವರೂಪನೂ ಪ್ರತ್ಯಗಾತ್ಮನೂ ಆಗಿರುತ್ತಾನೆ. ಇವನು ಪರಿಪೂರ್ಣಬ್ರಹ್ಮಸ್ವರೂಪನು!

## 18. ದಕ್ಷಿಣಾಮೂರ್ತಿಯಾಗಿ ಶಿವ

ಶಿವನು ನಟರಾಜನಾಗಿ, ತ್ರಿಪುರಾಂತಕನಾಗಿ, ಕಿರಾತನಾಗಿ, ಪ್ರಸಿದ್ಧನಾಗಿರುವಂತೆಯೇ **ದಕ್ಷಿಣಾಮೂರ್ತಿ**ಯಾಗಿಯೂ ಸುಪ್ರಸಿದ್ಧನಾಗಿರುತ್ತಾನೆ. ಅಧ್ಯಾತ್ಮ ಜ್ಞಾನಪಿಪಾಸುಗಳು ಶಿವನನ್ನು **ದಕ್ಷಿಣಾಮೂರ್ತಿ** ರೂಪದಿಂದ ಆರಾಧನೆ ಮಾಡಿದರೆ ಅಂಥ ಶಿವನು ಆತ್ಮಜ್ಞಾನವನ್ನೇ ಕರುಣಿಸುತ್ತಾನೆ. **ದಕ್ಷಿಣಾಮೂರ್ತಿ**ಯ ತತ್ತ್ವವನ್ನು ನಾವೀಗ ನೋಡೋಣ.

**ದಕ್ಷಿಣಾಮೂರ್ತಿ** ಎಂದರೆ ದಕ್ಷಿಣದಿಕ್ಕಿಗೆ ತಿರುಗಿಕೊಂಡಿರುವವನು ಎಂದರ್ಥ. ಸಾಮಾನ್ಯವಾಗಿ ಉತ್ತರ ಅಥವಾ ಪೂರ್ವಕ್ಕೆ ಮುಖಮಾಡಿಕೊಂಡೇ ನಾವು ನಮ್ಮ ಜಪಾದಿ ಅನುಷ್ಠಾನಗಳನ್ನು ಮಾಡುತ್ತೇವಲ್ಲವೆ? ಅವೆಲ್ಲವೂ ಅಭ್ಯುದಯ ಫಲಗಳನ್ನು ಕೊಡುವ ಕರ್ಮೋಪಾಸನೆಗಳು. ಆದರೆ ಶಿವನು ದಕ್ಷಿಣಾಭಿಮುಖವಾಗಿ ಉಪದೇಶಿಸುತ್ತಿರುವುದು ಮೋಕ್ಷಸಾಧನವಾದ ಆತ್ಮಜ್ಞಾನವನ್ನಲ್ಲವೆ? ಇದು ನಿವೃತ್ತಿಪರವಾದ ಮೋಕ್ಷಮಾರ್ಗ! ಸನಕ, ಸನಂದನ, ಸನತ್ಕುಮಾರ, ಸನತ್ಸುಜಾತರೇ ಮುಂತಾದ ನಿವೃತ್ತಿಮಾರ್ಗಿಗಳಾದ ಸಂನ್ಯಾಸಿಗಳಿಗೆ ಶಿವನು **ಬಾಲದಕ್ಷಿಣಾಮೂರ್ತಿ**ಯಾಗಿ ತೋರಿಕೊಂಡು ಮೌನದಿಂದ ಆತ್ಮಜ್ಞಾನವನ್ನು ಉಪದೇಶಿಸಿದನು. ಇದರಿಂದ ಆ ಶಿಷ್ಯರ ಸಂಶಯಗಳೆಲ್ಲವೂ ಪರಿಹಾರವಾದವು.

**ಚಿತ್ರಂ ವಟತರೋರ್ಮೂಲೇ ವೃದ್ಧಾಃ ಶಿಷ್ಯಾ ಗುರುರ್ಯುವಾ।**
**ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಛಿನ್ನಸಂಶಯಾಃ॥**

**ದಕ್ಷಿಣಾ** ಎಂದರೆ **ಜ್ಞಾನ** ಎಂಬ ಅರ್ಥವೂ ಇದೆ. **ದಕ್ಷಿಣಾಮೂರ್ತಿ** ಎಂದರೆ **ಜ್ಞಾನಮೂರ್ತಿ** ಎಂದರ್ಥ. ಶಿವನು ಜ್ಞಾನಮೂರ್ತಿಯೂ ಆಗಿದ್ದಾನೆ.

**ದಕ್ಷಿಣಾ ಶೇಮುಷೀ ಪ್ರೋಕ್ತಾ ಸಾ ಯಸ್ಯಾಮ್ ಈಕ್ಷಣೇ ಮುಖಮ್।**
**ದಕ್ಷಿಣಾಮೂರ್ತಿರಿತ್ಯುಕ್ತಃ ಜ್ಞಾನರೂಪೀ ಮಹೇಶ್ವರಃ॥**

ಸರ್ವಲೋಕಗಳಿಗೂ ಗುರುವಾಗಿ, ಭವರೋಗಿಗಳಿಗೆ ಜ್ಞಾನವೈದ್ಯನಾಗಿ, ಸಕಲವಿದ್ಯೆಗಳಿಗೂ ನಿಧಿಯಾದ ಶಿವನೇ **ದಕ್ಷಿಣಾಮೂರ್ತಿ**ಯು.

**ಗುರವೇ ಸರ್ವಲೋಕಾನಾಂ ಭಿಷಜೇ ಭವರೋಗಿಣಾಮ್।**
**ನಿಧಯೇ ಸರ್ವವಿದ್ಯಾನಾಂ ದಕ್ಷಿಣಾಮೂರ್ತಯೇ ನಮಃ॥**

**ಅನೇಕಜನ್ಮಸಂಪ್ರಾಪ್ತಕರ್ಮಬಂಧವಿದಾಹಿನೇ।**
**ಆತ್ಮವಿದ್ಯಾಪ್ರದಾನೇನ ದಕ್ಷಿಣಾಮೂರ್ತಯೇ ನಮಃ॥**

ದಕ್ಷಿಣಾಮೂರ್ತಿಯ ಕೃಪೆಯಿಂದ ನಾವುಗಳೂ ಆತ್ಮಜ್ಞಾನಿಗಳಾಗೋಣ.

# 19. ಮೃತ್ಯುಂಜಯಾಷ್ಟಕಸ್ತೋತ್ರಮ್

ಪ್ರಣಮ್ಯ ಶಿರಸಾ ಭಕ್ತ್ಯಾ ಶಿವಂ **ಮೃತ್ಯುಂಜಯಂ** ಮುದಾ।
ಅಪಮೃತ್ಯುಹರಂ ಶಾಂತಂ ಸರ್ವರೋಗನಿವಾರಕಮ್॥

ಸರ್ವಸಂಪತ್ಕರಂ ಧೀರಂ ಸರ್ವಾವಿದ್ಯಾನಿವರ್ತಕಮ್।
ಆಯುರಾರೋಗ್ಯಸಿದ್ಧ್ಯರ್ಥಂ ಭುಕ್ತಿಮುಕ್ತಿಪ್ರಸಿದ್ಧಯೇ॥

ವಿದ್ಯಾಬುದ್ಧಿಮಹಾಸಿದ್ಧಿಸರ್ವಸೌಭಾಗ್ಯಸಿದ್ಧಯೇ।
ಪಠೇತ್ **ಮೃತ್ಯುಂಜಯಸ್ಯೈ**ವಂ ಹ್ಯಷ್ಟಕಂ ಸ್ತೋತ್ರಮುತ್ತಮಮ್॥

ಶಿವಂ ಶಾಂತಂ ಮಹಾತ್ಮಾನಂ ವಿಶ್ವೇಶಂ ಭಕ್ತಪಾಲಕಮ್।
ಗಂಗಾಧರಂ ತಪೋಮೂರ್ತಿಂ **ಮೃತ್ಯುಂಜಯಮಹಂ ಭಜೇ** ॥ ೧ ॥

ಜನ್ಮಬಂಧವಿನಿರ್ಮುಕ್ತಂ ದಕ್ಷಿಣಾಮೂರ್ತಿರೂಪಿಣಮ್।
ನಿರಾಕಾರಂ ನಿರ್ವಿಕಾರಂ **ಮೃತ್ಯುಂಜಯಮಹಂ ಭಜೇ** ॥ ೨ ॥

ನೀಲಕಂಠಂ ನಿರಾಧಾರಂ ಚಂದ್ರಶೇಖರಮವ್ಯಯಮ್।
ನಿರ್ಭಯಂ ಭಯಹಂತಾರಂ **ಮೃತ್ಯುಂಜಯಮಹಂ ಭಜೇ** ॥ ೩ ॥

ದೇವಾದಿವಂದಿತಂ ಪೂಜ್ಯಂ ತಪೋನಿಷ್ಠಂ ನಿರಂಜನಮ್।
ಓಂಕಾರರೂಪಿಣಂ ದೇವಂ **ಮೃತ್ಯುಂಜಯಮಹಂ ಭಜೇ** ॥ ೪ ॥

ವೇದವೇದಾಂತವೇದಾಂಗಪ್ರತಿಪಾದ್ಯಂ ಜಗದ್ಗುರುಮ್।
ತ್ರಿಣೇತ್ರಂ ತ್ರಿಗುಣಾತೀತಂ **ಮೃತ್ಯುಂಜಯಮಹಂ ಭಜೇ** ॥ ೫ ॥

ಪಾರ್ವತೀಶಂ ಪಾಪನಾಶಂ ಸರ್ವಪಾಪವಿವರ್ಜಿತಮ್
ದ್ವಂದ್ವಾತೀತಂ ನಿಜಾನಂದಂ **ಮೃತ್ಯುಂಜಯಮಹಂ ಭಜೇ** ॥ ೬ ॥

ಕಾಲಾತೀತಂ ಭವಾತೀತಂ ವರೇಣ್ಯಂ ತ್ರಿಪುರಾಂತಕಮ್।
ಮನ್ಮಥಾರಿಂ ಸ್ವಯಂಶಂಭುಂ **ಮೃತ್ಯುಂಜಯಮಹಂ ಭಜೇ** ॥ ೭ ॥

ಜನ್ಮಮೃತ್ಯುಜರಾವ್ಯಾಧಿಸರ್ವದೋಷನಿವಾರಕಮ್।
ಮುಕ್ತಿರೂಪಂ ಪರಂ ಬ್ರಹ್ಮ **ಮೃತ್ಯುಂಜಯಮಹಂ ಭಜೇ** ॥ ೮ ॥

**ಮೃತ್ಯುಂಜಯಸ್ಯ** ರುದ್ರಸ್ಯ ಭಕ್ತಾನುಗ್ರಹಕಾರಿಣಃ।
ಅಷ್ಟಕಂ ಹ್ಯುತ್ತಮಂ ಸ್ತೋತ್ರಂ ಸರ್ವಸೌಭಾಗ್ಯದಾಯಕಮ್॥

ಪಠನಾತ್ ಶ್ರವಣಾಚ್ಚೈವ ಸರ್ವಾನ್ ಕಾಮಾನ್ ಅವಾಪ್ನುಯಾತ್।
ಅಪಮೃತ್ಯುಭಯಂ ನೈವ ಪಠತಃ ಶೃಣ್ವತಃ ಸದಾ॥

ಆಯುರಾರೋಗ್ಯಮೈಶ್ವರ್ಯಂ ವಿದ್ಯಾಂ ಬುದ್ಧಿಂ ಯಶೋ ಧನಮ್।
**ಮೃತ್ಯುಂಜಯ**ಪ್ರಸಾದೇನ ಲಭತೇ ನಾತ್ರ ಸಂಶಯಃ॥

# 20. ಶಿವನ 20 ವಿಶೇಷ ನಾಮಗಳು

ಪರಮಶಿವನಿಗೆ ಮಾತ್ರವೇ ಮೀಸಲಾಗಿರುವ 20 ಸಾರ್ಥಕನಾಮಗಳಿವು:

1. **ತ್ರ್ಯಂಬಕ.** ಮೂರು ಕಣ್ಣುಗಳನ್ನುಳ್ಳವನು. ಸೂರ್ಯ, ಅಗ್ನಿ, ಚಂದ್ರರೆಂಬ ಮೂರೂ ದೇವತೆಗಳೂ ಶಿವನಿಗೆ ಮೂರು ಕಣ್ಣುಗಳಾಗಿರುತ್ತಾರೆ.
2. **ನೀಲಕಂಠ.** ಸಮುದ್ರವನ್ನು ಕಡೆದಾಗ ಅದರಿಂದ ಹೊರಹೊಮ್ಮಿದ ವಿಷ ವನ್ನು ಕಂಠದಲ್ಲಿ ಧರಿಸಿ ಶಿವನು **ನೀಲಕಂಠ**ನಾದನು.
3. **ಚಂದ್ರಶೇಖರ.** ಚಂದ್ರನನ್ನು ತಲೆಯಲ್ಲಿ ಧರಿಸಿರುವ ದೇವತೆ.
4. **ಗಂಗಾಧರ.** ಸ್ವರ್ಗಲೋಕದಿಂದ ಭೂಲೋಕಕ್ಕೆ ಗರ್ವದಿಂದ ಬರುತ್ತಿದ್ದ ಗಂಗಾಮಾತೆಯನ್ನು ತನ್ನ ಜಟೆಯಲ್ಲಿ ಧರಿಸಿದ ದೇವತೆ.
5. **ಮೃತ್ಯುಂಜಯ.** ಮರಣವನ್ನು ಜಯಿಸಿರುವ ಧೀರನೇ ಶಿವ.
6. **ವಿಶ್ವನಾಥ.** ಹದಿನಾಲ್ಕು ಲೋಕಗಳಿಗೂ ಒಡೆಯನಾಗಿರುವ ದೇವತೆ.
7. **ಮಹಾದೇವ.** ದೇವಾಧಿದೇವತೆಗಳಿಗೂ ಪ್ರಭುವಾಗಿರುವ ದೇವ.
8. **ತ್ರಿಪುರಾಂತಕ.** ತ್ರಿಪುರಗಳನ್ನು ಧ್ವಂಸಮಾಡಿದ ದೇವ.
9. **ಶಂಕರ.** ಜಗತ್ತಿಗೆ ಶಾಂತಿಯನ್ನು ದಯಪಾಲಿಸುವ ದೇವತೆ.
10. **ಸದಾಶಿವ.** ಮೈಲಿಗೆಯೇ ಇಲ್ಲದೆ, ನಿತ್ಯಮಂಗಳಸ್ವರೂಪಿ.
11. **ರುಂಡಮಾಲೀ.** ಹೆಣದ ತಲೆಬುರುಡೆಗಳನ್ನು ಮಾಲೆಯನ್ನಾಗಿ ಉಳ್ಳವನು.
12. **ಸ್ಮಶಾನವಾಸೀ.** ಸ್ಮಶಾನದಲ್ಲಿ ವಾಸವಾಗಿದ್ದು ವಿರಕ್ತನಾಗಿರುವ ದೇವತೆ.
13. **ಶಂಭು.** ಶಾಂತಿಸ್ವರೂಪನಾಗಿ, ತಾನೇ ತಾನಾಗಿ ಇರುವವನು.
14. **ಗಿರಿಶ.** ಕೈಲಾಸ ಪರ್ವತದಲ್ಲಿದ್ದು ತಪೋನಿಷ್ಠನಾಗಿರುವವನು.
15. **ದಕ್ಷಿಣಾಮೂರ್ತಿ.** ಬಾಲಕ, ಮೌನಿ ಗುರುವಾಗಿ ಶಿಷ್ಯರ ಪ್ರಶ್ನೆಗಳಿಗೆಲ್ಲ ಮೌನದಿಂದ ಉತ್ತರವನ್ನು ಕೊಟ್ಟು ಜ್ಞಾನೋಪದೇಶಕನಾದ ಆದಿಗುರು.
16. **ನಟರಾಜ.** ಋಷಿಮುನಿಗಳಿಗೆಲ್ಲ ನಾಟ್ಯದಿಂದ ತತ್ತ್ವೋಪದೇಶವನ್ನು ಮಾಡಿ ಅವರಿಗೆಲ್ಲ ಆನಂದವನ್ನುಂಟುಮಾಡಿದ ದೇವತೆ.
17. **ರುದ್ರ.** ಭಕ್ತರ ಸಂಕಟಗಳನ್ನು ದೂರಮಾಡುವವನು.
18. **ಪಶುಪತಿ.** ಸಕಲ ಪಶುಪ್ರಾಣಿಗಳಿಗೂ ಅಧಿಪತಿಯಾದವನು.
19. **ಅರ್ಧನಾರೀಶ್ವರ.** ಶಕ್ತಿ ಶಕ್ತರಿಗೆ ಅಭೇದವನ್ನು ತಿಳಿಸುವ ದೇವತೆ.
20. **ಹರ.** ಭಕ್ತರುಗಳ ಸಂಕಟಗಳನ್ನು ದೂರಮಾಡುವವನು.

# 21. 'ಶಿವರಾತ್ರಿ'ಗೆ ವೇದಾಂತದ ಅರ್ಥ

ನಮ್ಮಲ್ಲಿ ಪ್ರತಿಯೊಂದು ಹಬ್ಬಕ್ಕೂ, ಪ್ರತಿಯೊಂದು ಅನುಷ್ಠಾನಕ್ಕೂ ಸೂಕ್ಷ್ಮವಾದ ಆಧ್ಯಾತ್ಮಿಕ ಅರ್ಥವು ಇರುತ್ತದೆ. ಇದು ಒಳಗಿನ ರಹಸ್ಯಾರ್ಥ. ಹೀಗೆ ನೋಡಿದಾಗ **ಶಿವರಾತ್ರಿ** ಹಬ್ಬಕ್ಕೂ ವೇದಾಂತದ ರಹಸ್ಯಾರ್ಥವು ಇರುತ್ತದೆ.

1. **ಶಿವರಾತ್ರಿ.**—ಶಿವನನ್ನು ಪೂಜಿಸಿ, ರಾತ್ರಿಯನ್ನು ಮಂಗಳವನ್ನಾಗಿಸುವ ಹಬ್ಬ. ಇಲ್ಲಿ ಶಿವನೆಂದರೆ ದ್ವೈತಪ್ರಪಂಚದ ಸೋಂಕೇ ಇಲ್ಲದಿರುವ, ಗುಣಗಳ ಹಂಗಿಲ್ಲದ, ನಿರ್ಗುಣ ಪರಬ್ರಹ್ಮ. ರಾತ್ರಿ ಎಂದರೆ ಅವಿದ್ಯಾ ತಮಸ್ಸು. ಜ್ಞಾನಸ್ವರೂಪಿಯಾದ ಶಿವನೇ ತಾನೆಂದು ಅರ್ಥಮಾಡಿಕೊಂಡರೆ ಅವಿದ್ಯೆಯು ನಾಶವಾಗಿ ಜ್ಞಾನೋದಯವಾಗುವುದೇ **ಶಿವರಾತ್ರಿ.**
2. **ಶಿವಪೂಜಾ.**—ಅವಸ್ಥಾತ್ರಯರಹಿತನಾದ, ದೇಹೇಂದ್ರಿಯ ಮನೋಬುದ್ಧಿ ಪ್ರಾಣಗಳೆಂಬ ಉಪಾಧಿಗಳ ಹಂಗಿಲ್ಲದಿರುವ, ಸಾಕ್ಷಿಸ್ವರೂಪನಾದ ಆತ್ಮನೇ ತಾನೆಂದು—ಶಾಸ್ತ್ರಾಚಾರ್ಯರ ಉಪದೇಶದಿಂದ ಅರ್ಥಮಾಡಿಕೊಳ್ಳುವುದೇ **ಶಿವಪೂಜಾ**. ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ ಮತ್ತು ಆನಂದಮಯಗಳೆಂಬ ಪಂಚಕೋಶಗಳೂ ಅನಾತ್ಮವೇ ಎಂದೂ, ಪಂಚಕೋಶಗಳಿಗೂ ಸಾಕ್ಷಿಯಾದ ಆತ್ಮನೇ ತಾನೆಂದೂ ಮತ್ತೆ ಮತ್ತೆ ಅನುಸಂಧಾನಮಾಡುವುದೇ **ಶಿವಾಭಿಷೇಕವು.**
3. **ಉಪವಾಸ.**—ಉಪ ಸಮೀಪೇ, ವಾಸಃ ವಸನಮ್. ನಿತ್ಯನಿರಂಜನನೂ, ನಿರ್ವಿಶೇಷ ನಿರ್ಗುಣನೂ, ನಿರುಪಾಧಿಕನೂ, ನಿರವಯವನೂ ಆಗಿರುವ ಶಿವನನ್ನು ಸದಾ ಚಿಂತನೆಮಾಡುತ್ತಾ, ಶಿವನ ಜೊತೆಯಲ್ಲಿರುವುದೇ **ಉಪವಾಸವು**. ಇಂದ್ರಿಯ ಮನೋಬುದ್ಧಿಗಳನ್ನು ಅನಾತ್ಮವಿಷಯ ಚಿಂತನೆಯಿಂದ ಬಿಡಿಸಿ, ಆತ್ಮನಲ್ಲಿಯೇ ನೆಲೆಗೊಳ್ಳುವುದೇ **ಉಪವಾಸವು.**
4. **ಜಾಗರಣೆ.**—ನಿದ್ರೆಯನ್ನು ಮಾಡದೇ ಎಚ್ಚರವಾಗಿರುವುದು. ಅವಿದ್ಯೆಯೇ ನಿದ್ರೆ, ಆತ್ಮನನ್ನು ಸರಿಯಾಗಿ ಅರಿಯದಿರುವುದೇ ನಿದ್ರಾ. ಈ ಅವಿದ್ಯೆಯನ್ನು ದೂರಮಾಡಿಕೊಂಡು ಶಿವನೇ ತಾನೆಂದು ದೃಢವಾಗಿ ಧೈರ್ಯವಾಗಿ ತಿಳಿಯುವುದೇ ಜಾಗರಣೆ. ಕನಸಿನಿಂದ ಎಚ್ಚರವಾದಕೂಡಲೇ ಆ ಸುಳ್ಳು ಕಲ್ಪನೆಗಳನ್ನು ಬಿಟ್ಟು ನಿಜವಾದ ಪ್ರಪಂಚಕ್ಕೆ ಬರುವಂತೆಯೇ ಅವಿದ್ಯಾ ಕನಸಿನಿಂದ ಎಚ್ಚರಗೊಂಡಾಗ ಆತ್ಮನ ಅರಿವು ಉಂಟಾಗುತ್ತದೆ.

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ।**
**ಅಜಮನಿದ್ರಮಸ್ವಪ್ನಮ್ ಅದ್ವೈತಂ ಬುಧ್ಯತೇ ತದಾ॥**

ಎಂದು ವೇದಾಂತಸಂಪ್ರದಾಯವಿದರಾದ ಶ್ರೀ ಗೌಡಪಾದರು ತಿಳಿಸಿರುತ್ತಾರೆ.

## 22. ಶಿವನಿಗೆ ಇಷ್ಟವಾದ ತಿಥಿ ವಾರ ನಕ್ಷತ್ರಗಳು

ಸರ್ವಾತ್ಮಕನಾದ ಪರಮಾತ್ಮನ ಆರಾಧನೆಗೆ ಎಲ್ಲ ದಿನಗಳೂ ಶ್ರೇಷ್ಠವೇ. ಎಲ್ಲ ತಿಥಿ ವಾರ ನಕ್ಷತ್ರಗಳೂ ಪರ್ವಕಾಲವೇ ಆಗಿರುತ್ತವೆ. ಇಲ್ಲಿ ಶುಭ, ಅಶುಭಗಳ ಮಾತೇ ಇಲ್ಲ. ಎಲ್ಲ ಮುಹೂರ್ತಗಳೂ ಶುಭ, ಎಲ್ಲ ದೇಶಗಳೂ ಪವಿತ್ರವೇ. ಆದರೂ ವ್ಯಾವಹಾರಿಕ ದೃಷ್ಟಿಯಿಂದ, ಸಾಂಪ್ರದಾಯಿಕ ದೃಷ್ಟಿಯಿಂದ ಒಬ್ಬೊಬ್ಬ ದೇವತೆಗೂ ಒಂದೊಂದು ವಿಶೇಷವಾದ ತಿಥಿ, ವಾರ, ನಕ್ಷತ್ರಗಳು ಇಷ್ಟವಾಗಿರುತ್ತವೆ. ಹೀಗಾಗಿ ಶಿವನ ಪೂಜೆಗೂ ಒಂದು ವಿಶೇಷ ಮಾಸ, ಪಕ್ಷ, ತಿಥಿ, ವಾರ, ನಕ್ಷತ್ರಗಳಿರುತ್ತವೆ. ಅವುಗಳನ್ನು ಇಲ್ಲಿ ಸಂಕ್ಷೇಪವಾಗಿ ನೋಡೋಣ:

**ಕಾರ್ತಿಕ ಮಾಸ:** ಕೃತ್ತಿಕಾ ನಕ್ಷತ್ರದ ಮಾಸ **ಕಾರ್ತಿಕಮಾಸ**. ಈ ಮಾಸವು ಶಿವನ ಪೂಜಾ ಅಭಿಷೇಕಾದಿಗಳಿಗೆ ಪ್ರಶಸ್ತವಾಗಿರುತ್ತದೆ. ಶಿವಾಲಯಗಳಲ್ಲಿ ಈ ಇಡೀ ಮಾಸದಲ್ಲಿ ವಿಶೇಷ ಪೂಜಾದಿ ಕೈಂಕರ್ಯಗಳು ನಡೆಯುತ್ತವೆ. ಐದು ವರ್ಷಗಳಿಗೊಮ್ಮೆ ತಲಕಾಡು ಕ್ಷೇತ್ರದಲ್ಲಿ "**ಪಂಚಲಿಂಗದರ್ಶನ**"ದ ಜಾತ್ರೆ ಯಾಗುವುದು ಈ ಮಾಸದಲ್ಲಿಯೇ. ಕಾರ್ತಿಕಮಾಸದ ಸೋಮವಾರಗಳಂತೂ ಶಿವನ ಪೂಜೆಗೆ ಅತ್ಯಂತ ಪ್ರಶಸ್ತವಾಗಿರುತ್ತವೆ.

**ಮಾಘಮಾಸ:** ಪಾಪಗಳನ್ನು ದೂರಮಾಡುವ (ಮಾ ಅಘ) ಮಾಸವೇ **ಮಾಘಮಾಸ**. ನದೀ ಸ್ನಾನವನ್ನು ಮಾಡಿ, ಸೂರ್ಯನಮಸ್ಕಾರವನ್ನು ಮಾಡಿ, ಪರಮೇಶ್ವರನನ್ನು ಆರಾಧಿಸಿ ಸಕಲ ಪಾಪಗಳನ್ನೂ ಬೂದಿಮಾಡಿಕೊಳ್ಳುವ ಪವಿತ್ರ ಮಾಸವೇ ಈ **ಮಾಘಮಾಸ**. ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯಂದೇ **ಮಹಾಶಿವರಾತ್ರಿ** ಉತ್ಸವ. ಇಂದು ಅನೇಕ ಶಿವಾಲಯಗಳಲ್ಲಿ ರಥೋತ್ಸವಗಳು ನಡೆಯುತ್ತವೆ. ಶಿವಭಕ್ತರಿಗೆ ಇದೊಂದು ಮಹಾಪರ್ವಕಾಲ.

**ಕೃಷ್ಣಪಕ್ಷ:** ಶಿವನ ಆರಾಧನೆಗೆ ಶುಕ್ಲಪಕ್ಷಕ್ಕಿಂತಲೂ ಕೃಷ್ಣಪಕ್ಷವೇ ಶ್ರೇಷ್ಠ. ಆದ್ದರಿಂದಲೇ ಪ್ರತಿಮಾಸದ **ಕೃಷ್ಣಚತುರ್ದಶಿ**ಯಂದೇ ಮಾಸಶಿವರಾತ್ರಿಯು.

**ಚತುರ್ದಶೀ ತಿಥಿ:** ಪ್ರತೀಮಾಸದಲ್ಲೂ ಶುಕ್ಲಪಕ್ಷ ಹಾಗೂ ಕೃಷ್ಣಪಕ್ಷಗಳಲ್ಲಿ ಚತುರ್ದಶೀ ತಿಥಿಯು ಶಿವನಪೂಜೆಗೆ ಪ್ರಶಸ್ತ. ಆದರೆ ಕೃಷ್ಣಪಕ್ಷದ ಚತುರ್ದಶಿಯು **ಮಾಸಶಿವರಾತ್ರಿ** ಎಂಬ ಹೆಸರಿನಿಂದಲೇ ಪ್ರಸಿದ್ಧವಾಗಿರುತ್ತದೆ.

**ಸೋಮವಾರ:** ಸೋಮನೆಂದರೆ ಇಂದು, ಚಂದ್ರ. ಚಂದ್ರಶೇಖರನಾದ ಶಿವನಿಗೆ ಚಂದ್ರವಾರ, ಇಂದುವಾರವು ತುಂಬಾ ಪ್ರಿಯವಾದ ವಾರ.

**ಕೃತ್ತಿಕಾ ನಕ್ಷತ್ರ:** ಕೃತ್ತಿಕಾ ನಕ್ಷತ್ರವು ಕುಮಾರಸ್ವಾಮಿಯ ಹಾಗೂ ಶಿವನ ಪೂಜೆಗೆ ಅತ್ಯಂತ ಶುಭವಾದದ್ದು. ಹೀಗೆ ಈ ಪ್ರಶಸ್ತ ಮುಹೂರ್ತಗಳಲ್ಲಿ ಶಿವನನ್ನು ಆರಾಧಿಸಿ, ಶಿವನನ್ನು ಸಂತೋಷಗೊಳಿಸಿ, ಶಿವನ ಅನುಗ್ರಹಕ್ಕೆ ಪಾತ್ರರಾಗೋಣ.

# 23. ಆದರ್ಶ ಗೃಹಸ್ಥನಾಗಿ ಶಿವ

ಶಿವನನ್ನು ಪರಬ್ರಹ್ಮವೆಂದೂ ಆದಿಸದ್ಗುರು ದಕ್ಷಿಣಾಮೂರ್ತಿಯೆಂದೂ ಆದರ್ಶ ತಪೋಮೂರ್ತಿಯೆಂದೂ ಉಪಾಸನೆ ಮಾಡಬಹುದು. ಅಂತೆಯೇ ಪರಮಶಿವನನ್ನು ಒಬ್ಬ ಆದರ್ಶ ಸದ್‌ಗೃಹಸ್ಥನೆಂದೂ ಭಾವಿಸಬಹುದು. ಸರ್ವ ಸ್ವರೂಪವೂ ಸರ್ವಾತ್ಮನೂ ಆಗಿರುವ ಶಿವನಲ್ಲಿ ಯಾವ ಗುಣಗಳು ತಾನೆ ಹೊಂದುವದಿಲ್ಲ? ಸರಿ, ಈಗ ಶಿವನು ಸದ್‌ಗೃಹಸ್ಥನು ಹೇಗೆ? ಎಂದರೆ....

**ಗೃಹೇ ತಿಷ್ಠತಿ ಇತಿ ಗೃಹಸ್ಥಃ; ಗೃಹಮ್ ಆತ್ಮತ್ವೇನ ಗತಃ ಗೃಹಸ್ಥಃ।** ಮನೆ, ಹೆಂಡತಿ, ಮಕ್ಕಳನ್ನೇ ತಾನೆಂದು ತಿಳಿದ ಗಂಡಸು ಮನುಷ್ಯನೇ ಗೃಹಸ್ಥನು. ಏನು? ಶಿವನು ಗಂಡಸೇ? ಅವನೊಬ್ಬ ಮನುಷ್ಯನೇ? ಎಂದರೆ, ಹೌದು. ಈಗ ಇಲ್ಲಿ ನಾವು ಶಿವನನ್ನು ನಮ್ಮಂತೆಯೇ ಒಬ್ಬ ಗಂಡಸು ಮನುಷ್ಯನೆಂದೂ, ಆದರ್ಶ ಗೃಹಸ್ಥನೆಂದೂ ಭಾವಿಸುತ್ತಿದ್ದೇವಲ್ಲವೆ?

ಶಿವನೆಂದರೆ ಈಶ್ವರ, ಇವನೊಬ್ಬ ಯೋಗ್ಯನಾದ ಅತ್ಯುತ್ತಮನಾದ ವರ; ಇವನಿಗೆ ಅನುರೂಪಳಾದ ತಪಸ್ವಿನಿಯಾದ ಒಬ್ಬ ವಧೂ ಎಂದರೆ ಪಾರ್ವತಿ. ಆದಿಶಕ್ತಿ ಪ್ರಕೃತಿಯಾದ ಪಾರ್ವತಿಯನ್ನು ನಾವಿಲ್ಲಿ ಒಂದು ವಧೂ, ಹುಡುಗಿ ಎಂದು ಭಾವಿಸುತ್ತಿದ್ದೇವೆ ಎಂಬುದನ್ನು ಮರೆಯಬಾರದು. ಹಿಮವಂತರಾಜನ ಕುಮಾರಿಯಾದ ಪಾರ್ವತಿಯೇ ಶಿವನ ಮಡದಿ. ಇವರಿಬ್ಬರಿಗೂ ವಿವಾಹ ವಾಯಿತು. ಇವರೇ ಪಾರ್ವತೀಪರಮೇಶ್ವರರೆಂಬ ಆದರ್ಶ ಆರ್ಷ ಪುಣ್ಯದಂಪತಿ ಗಳು. ಶಿವನ ವಾಹನ ನಂದಿ, ಎಂದರೆ ಎತ್ತು; ಗೌರಿಯ ವಾಹನ ಸಿಂಹ.

ಈ ಆದರ್ಶದಂಪತಿಗಳಿಗೆ ಇಬ್ಬರು ಸುಪುತ್ರರು; ಹಿರಿಯವನು ಗಣೇಶ, ವಿದ್ಯಾಧಿದೇವತೆ; ಕಿರಿಯವನೇ ಸುಬ್ರಹ್ಮಣ್ಯ, ಆರೋಗ್ಯದೇವತೆ. ಗಣಪತಿಗೆ ಆನೆಯ ಮುಖ, ಹೊಟ್ಟೆಗೆ ಹಾವಿನ ಹಗ್ಗ; ಸುಬ್ರಹ್ಮಣ್ಯನಿಗೆ ಆರು ಮುಖಗಳು, ಆದ್ದರಿಂದಲೇ ಇವನು ಷಣ್ಮುಖನಾದ. ಸುಬ್ರಹ್ಮಣ್ಯನು ಸ್ಕಂದ, ಕುಮಾರ, ಷಣ್ಮುಖ—ಎಂಬೀ ಹೆಸರುಗಳಿಂದ ಪ್ರಸಿದ್ಧನಾಗಿರುತ್ತಾನೆ. ಗಣೇಶನ ವಾಹನ ಇಲಿ; ಕುಮಾರನ ವಾಹನ ನವಿಲು.

ಶಿವನ ಆಯುಧ ತ್ರಿಶೂಲ, ಗೌರಿಯ ಆಯುಧ ಶೂಲ; ಗಣಪತಿಯ ಆಯುಧ ಪಾಶ ಅಂಕುಶಗಳು, ಸುಬ್ರಹ್ಮಣ್ಯನ ಆಯುಧ ವೇಲ್ ಅಂದರೆ ಭರ್ಜಿ. ಗಣಪತಿಗೆ ಸಿದ್ಧಿ ಬುದ್ಧಿ—ಎಂಬ ಇಬ್ಬರು ಪತ್ನಿಯರು; ಕುಮಾರಸ್ವಾಮಿಗೂ ವಲ್ಲೀ ದೇವಸೇನಾ—ಎಂಬೀ ಇಬ್ಬರು ಕಾಂತೆಯರು. ಪರಮೇಶ್ವರನಿಗೂ ಗಂಗಾ ಮತ್ತು ಗೌರಿ—ಎಂಬೀ ಇಬ್ಬರು ಪತ್ನಿಯರಲ್ಲವೆ? ತಂದೆಯಂತೆಯೇ ಆ ಇಬ್ಬರು ಪುತ್ರರಿಗೂ ಇಬ್ಬಿಬ್ಬರು ಪತ್ನಿಯರಂತೆ. ಹೀಗೆ ಶಿವನು ಆದರ್ಶ ಗೃಹಸ್ಥನು.

# 24. ಶ್ರೀಶಂಕರರು ಕಂಡ 'ಈಶ್ವರ'

ವೇದಾಂತಭಾಷ್ಯಕಾರರಾದ ಭಗವಾನ್ ಶ್ರೀಶಂಕರಾಚಾರ್ಯರೂ ಶಂಕರನ ಅವತಾರಿಗಳೇ. ಪರಮೇಶ್ವರನ ಅಂಶಸಂಭೂತರಾದ ಶ್ರೀ ಶಂಕರರು ಸ್ವತಃ ತಾವು ಯತಿಪುಂಗವರೂ ಬ್ರಹ್ಮಾತ್ಮನಿಷ್ಠರೂ ಆದ ಅದ್ವೈತವೇದಾಂತಿಪುಂಗವರು. ಇವರು ತಮ್ಮ ಭಾಷ್ಯಗಳಲ್ಲಿ 'ಈಶ್ವರ' ಶಬ್ದವನ್ನು ಬಳಸಿರುತ್ತಾರೆ. ಇವನೇ "ಶ್ರೀಶಂಕರರು ಕಂಡ ಈಶ್ವರನು". ಈ ಈಶ್ವರನು ಪಾರ್ವತೀಪತಿಯಾದ, ಒಬ್ಬ ದೇವತೆಯಲ್ಲ, ಮತ್ತೇನೆಂದರೆ ನಿತ್ಯಶುದ್ಧನಿತ್ಯಬುದ್ಧನಿತ್ಯಮುಕ್ತನಾದ ಪರಿಪೂರ್ಣನಾದ ಬ್ರಹ್ಮವೇ.

ಶಾಂಕರಭಾಷ್ಯಗಳಲ್ಲಿ ಅನೇಕ ಕಡೆಗಳಲ್ಲಿ **ಈಶ್ವರ, ಶಿವ** ಶಬ್ದಗಳನ್ನು ಬಳಸಿ ಈ ವಿಚಾರವನ್ನು ಶ್ರೀಶಂಕರರು ತಿಳಿಸಿರುತ್ತಾರೆ. ಉದಾಹರಣೆಗೆ:

1. ಚಿನ್ಮಾತ್ರಸ್ವರೂಪನಾದ ಪರಬ್ರಹ್ಮವೇ ಈಶ್ವರ. ಇವನೇ ಜಗತ್ಕಾರಣ.

**ನ ಯಥೋಕ್ತವಿಶೇಷಣಸ್ಯ ಜಗತಃ ಯಥೋಕ್ತವಿಶೇಷಣಮ್ ಈಶ್ವರಮ್ ಮುಕ್ತ್ವಾ ಅನ್ಯತಃ.....ಸಂಸಾರಿಣೋ ವಾ ಉತ್ಪತ್ತ್ಯಾದಿ ಸಂಭವತಿ ॥**

ಇಂಥ ಅದ್ಭುತವಾದ ಜಗತ್ತಿಗೆ ಚೇತನನಾದ **ಈಶ್ವರ**ನಲ್ಲದೆ ಬೇರೆ ಪ್ರಧಾನಾದಿ ಅಚೇತನವಸ್ತುಗಳಾಗಲೀ, ಸಂಸಾರಿಯಾದ ಆತ್ಮನಾಗಲೀ ಕಾರಣವಲ್ಲ.

ಬ್ರಹ್ಮಸೂತ್ರಭಾಷ್ಯ 1-1-2

2. ನಿತ್ಯಸಿದ್ಧನಾದ ಈಶ್ವರನಿಗೆ ಮಾತ್ರವೇ ನಿತ್ಯಜ್ಞಾನವು ಸಾಧ್ಯ.

**ನಿತ್ಯಸಿದ್ಧಸ್ಯ ಈಶ್ವರಸ್ಯ ಸೃಷ್ಟಿಸ್ಥಿತಿ ಸಂಹೃತಿ ವಿಷಯಂ ನಿತ್ಯಜ್ಞಾನಮ್ ॥**

ಬ್ರಹ್ಮಸೂತ್ರಭಾಷ್ಯ 1-1-5

3. ಪರಮೇಶ್ವರನು ಭೂತಯೋನಿಯು.

**ಪರಮೇಶ್ವರಃ ಭೂತಯೋನಿಃ ಇತಿ ವೇದಾಂತೇಷು ಪ್ರತಿಪಾದ್ಯತೇ ॥**

ಬ್ರಹ್ಮಸೂತ್ರಭಾಷ್ಯ 1-2-22

4. ಶಿವ—ಎಂದರೆ ಮಂಗಳಕರವಾದ ಮೋಕ್ಷಾನಂದ.

**ಅಭಯಂ ನಿತ್ಯಂ ಶಿವಮ್ ಅಚಲಮ್ ಇಚ್ಛನ್ ಶಿಷ್ಯಃ ಪಪ್ರಚ್ಛ ॥**

ಕೇನ ಭಾಷ್ಯ ಅವತರಣಿಕಾ

5. ಈಶ್ವರನೆಂದರೆ ಸರ್ವಭೂತಾಂತರಾತ್ಮನಾದ ನಾರಾಯಣನು

**ಈಶ್ವರಃ ಈಶನಶೀಲಃ ನಾರಾಯಣಃ ಸರ್ವಭೂತಾನಾಮಂತರಾತ್ಮಾ ॥**

ಭಗವದ್ಗೀತಾ ಭಾಷ್ಯ 18-61

ಈಶ, ಈಶ್ವರ, ಶಿವ, ನಾರಾಯಣ, ಪರಬ್ರಹ್ಮ—ಇವು ಪರ್ಯಾಯಗಳು.

# 25. ದ್ವಾದಶ "ಜ್ಯೋತಿರ್ಲಿಂಗ"ಗಳು

ಪರಮಶಿವನು ನಿರಾಕಾರನಾದ ಸಚ್ಚಿದಾನಂದರೂಪನಾದ ಭಗವಂತನು. ಇವನನ್ನು ಲಿಂಗರೂಪದಿಂದ ಆರಾಧಿಸುವ ಸತ್‌ಸಂಪ್ರದಾಯವು ನಮ್ಮದು. ಲಿಂಗರೂಪಿಯಾದ ಶಿವನ ದರ್ಶನ, ಸ್ಪರ್ಶನ, ಅಭಿಷೇಕ, ಪೂಜನ, ನಮನ ಗಳಿಂದ ಎಲ್ಲ ಪಾಪಗಳೂ ಬೂದಿಯಾಗಿಹೋಗುತ್ತವೆ, ಮತ್ತು ಅಂಥ ಭಕ್ತರು ಶಿವನ ಕೃಪಾನುಗ್ರಹದಿಂದ ಚಿತ್ತಶುದ್ಧಿಯನ್ನು ಸಂಪಾದಿಸಿಕೊಂಡು ಈ ಸಂಸಾರ ಸಾಗರದಿಂದ ವಿಮುಕ್ತರಾಗಿ ಬ್ರಹ್ಮಸ್ವರೂಪರೇ ಆಗಿಬಿಡುತ್ತಾರೆ. ದ್ವಾದಶ ಜ್ಯೋತಿರ್ಲಿಂಗ ಸ್ತೋತ್ರದ ಪಾರಾಯಣವು ಪುಣ್ಯಫಲಪ್ರದವು.

## ದ್ವಾದಶ ಜ್ಯೋತಿರ್ಲಿಂಗಸ್ತೋತ್ರಮ್

**ಸೌರಾಷ್ಟ್ರೇ ಸೋಮನಾಥಂ ಚ ಶ್ರೀಶೈಲೇ ಮಲ್ಲಿಕಾರ್ಜುನಮ್ ।**
**ಉಜ್ಜಯಿನ್ಯಾಂ ಮಹಾಕಾಲಮ್ ಓಂಕಾರೇ ಹ್ಯಮಲೇಶ್ವರಮ್ ॥**

**ಪರಲ್ಯಾಂ ವೈದ್ಯನಾಥಂ ಚ ನಾಗೇಶಂ ದಾರುಕಾವನೇ ।**
**ಸೇತುಬಂಧೇ ಚ ರಾಮೇಶಂ ಡಾಕಿನ್ಯಾಂ ಭೀಮಶಂಕರಮ್ ॥**

**ಹಿಮಾಲಯೇ ತು ಕೇದಾರಂ ಘುಷ್ಣೇಶಂ ಚ ಶಿವಾಲಯೇ ।**
**ವಾರಾಣಸ್ಯಾಂ ತು ವಿಶ್ವೇಶಂ ತ್ರ್ಯಂಬಕಂ ಗೌತಮೀತಟೇ ॥**

**ಏತಾನಿ ಜ್ಯೋತಿರ್ಲಿಂಗಾನಿ ಪ್ರಾತಃಕಾಲೇ ತು ಯಃ ಸ್ಮರೇತ್ ।**
**ಸರ್ವಕಾಮಾನವಾಪ್ನೋತಿ ಶಿವಲೋಕಂ ಸ ಗಚ್ಛತಿ ॥**

1. ಸೌರಾಷ್ಟ್ರದಲ್ಲಿ **ಸೋಮನಾಥೇಶ್ವರ** ಜ್ಯೋತಿರ್ಲಿಂಗ (ಗುಜರಾತ್)
2. ಶ್ರೀಶೈಲದಲ್ಲಿ **ಮಲ್ಲಿಕಾರ್ಜುನ** ಜ್ಯೋತಿರ್ಲಿಂಗ (ಆಂಧ್ರದಲ್ಲಿ ಕೃಷ್ಣಾತೀರ)
3. ಉಜ್ಜಯಿನಿಯಲ್ಲಿ **ಮಹಾಕಾಲೇಶ್ವರ** ಜ್ಯೋತಿರ್ಲಿಂಗ (ಮಧ್ಯಪ್ರದೇಶ)
4. ಓಂಕಾರದಲ್ಲಿ **ಅಮಲೇಶ್ವರ** ಜ್ಯೋತಿರ್ಲಿಂಗ (ಮಧ್ಯಪ್ರದೇಶ, ನರ್ಮದಾ)
5. ಪರಳಿಯಲ್ಲಿ **ವೈದ್ಯನಾಥೇಶ್ವರ** ಜ್ಯೋತಿರ್ಲಿಂಗ (ಬಿಹಾರ್)
6. ದಾರುಕಾವನೇ **ನಾಗೇಶ್ವರ** ಜ್ಯೋತಿರ್ಲಿಂಗ (ಗುಜರಾತ್ ದ್ವಾರಕಾಸಮೀಪ)
7. ಸೇತುಬಂಧದಲ್ಲಿ **ರಾಮೇಶ್ವರ** ಜ್ಯೋತಿರ್ಲಿಂಗ (ತಮಿಳುನಾಡು)
8. ಡಾಕಿನಿಯಲ್ಲಿ **ಭೀಮಶಂಕರ** ಜ್ಯೋತಿರ್ಲಿಂಗ (ಮಹಾರಾಷ್ಟ್ರ)
9. ಹಿಮಾಲಯದಲ್ಲಿ **ಕೇದಾರೇಶ್ವರ** ಜ್ಯೋತಿರ್ಲಿಂಗ (ಹಿಮಾಲಯ ಪರ್ವತ)
10. ಶಿವಾಲಯದಲ್ಲಿ **ಘುಷ್ಣೇಶ್ವರ** ಜ್ಯೋತಿರ್ಲಿಂಗ (ಮಹಾರಾಷ್ಟ್ರ)
11. ವಾರಾಣಸಿಯಲ್ಲಿ **ವಿಶ್ವನಾಥ** ಜ್ಯೋತಿರ್ಲಿಂಗ (ಉತ್ತರಪ್ರದೇಶ)
12. ಗೌತಮೀತಟದಲ್ಲಿ **ತ್ರ್ಯಂಬಕೇಶ್ವರ** ಜ್ಯೋತಿರ್ಲಿಂಗ (ಮಹಾರಾಷ್ಟ್ರ)

## 26. ಶಿವಪಂಚಾಕ್ಷರೀ ಸ್ತೋತ್ರಮ್

**ನಮಃ ಶಿವಾಯ** ಎಂಬ ಶಿವಪಂಚಾಕ್ಷರೀ ಮಂತ್ರವು ಶಿವನಿಗೆ ಅತ್ಯಂತ ಪ್ರಿಯವಾದದ್ದು. ಭಕ್ತರು **ನಮಃ ಶಿವಾಯ** ಮಂತ್ರವನ್ನು ಸದಾ ಜಪಿಸುವುದ ರಿಂದ ಶಿವನ ಕೃಪೆಗೆ ಪಾತ್ರರಾಗಿ ಸರ್ವಪಾಪ ಸರ್ವರೋಗ ಸರ್ವ ಆಪತ್ತು ಗಳಿಂದಲೂ ಬಿಡುಗಡೆಹೊಂದುತ್ತಾರೆ. ಈ ಕೆಳಗಿನ **ಶಿವಪಂಚಾಕ್ಷರೀ ಸ್ತೋತ್ರ** ವನ್ನು ಮಾನವರು ಪ್ರತಿದಿನವೂ ಪಾರಾಯಣಮಾಡಬೇಕು.

**ನಾಗೇಂದ್ರಹಾರಾಯ ತ್ರಿಲೋಚನಾಯ ಭಸ್ಮಾಂಗರಾಗಾಯ ಮಹೇಶ್ವರಾಯ।**
**ನಿತ್ಯಾಯ ಶುದ್ಧಾಯ ದಿಗಂಬರಾಯ ತಸ್ಮೈ ನಕಾರಾಯ ನಮಃ ಶಿವಾಯ ॥೧॥**

*ನಾಗೇಂದ್ರ ಹಾರಿಯೂ, ತ್ರಿನೇತ್ರನೂ, ಭಸ್ಮಧಾರಿಯೂ, ನಿತ್ಯಶುದ್ಧನೂ, ದಿಗಂಬರನೂ ಆದ 'ನ'ಕಾರದ ಶಿವನೆಂಬ ಮಹೇಶ್ವರನಿಗೆ ನಮಸ್ಕಾರ.*

**ಮಂದಾಕಿನೀಸಲಿಲಚಂದನಚರ್ಚಿತಾಯ ನಂದೀಶ್ವರಪ್ರಮಥನಾಥಮಹೇಶ್ವರಾಯ।**
**ಮಂದಾರಮುಖ್ಯಬಹುಪುಷ್ಪಸುಪೂಜಿತಾಯ ತಸ್ಮೈ ಮಕಾರಾಯ ನಮಃ ಶಿವಾಯ ॥೨**

*ಮಂದಾಕಿನೀ ನದಿಯ ದಡದಲ್ಲಿನ ಚಂದನದಿಂದ ಪೂಜಿಸಲ್ಪಟ್ಟು, ನಂದೀಶ್ವರ ಪ್ರಮಥಗಣಗಳಿಗೆ ಒಡೆಯನಾದ, ಮಂದಾರಪುಷ್ಪಗಳಿಂದ ಪೂಜಿತನಾದ* ***ಮ****ಕಾರದ ಶಿವನಿಗೆ ನಮಸ್ಕಾರ.*

**ಶಿವಾಯ ಗೌರೀವದನಾಬ್ಜವೃಂದಸೂರ್ಯಾಯ ದಕ್ಷಾಧ್ವರನಾಶಕಾಯ।**
**ಶ್ರೀನೀಲಕಂಠಾಯ ವೃಷಧ್ವಜಾಯ ತಸ್ಮೈ ಶಿಕಾರಾಯ ನಮಃ ಶಿವಾಯ ॥೩॥**

*ಶಿವನೂ ಗೌರೀವದನಕಮಲಸೂರ್ಯನೂ, ದಕ್ಷಪ್ರಜಾಪತಿಯ ಯಜ್ಞಧ್ವಂಸಕನೂ, ನೀಲಕಂಠನೂ, ವೃಷಭಧ್ವಜನೂ ಆಗಿರುವ* ***ಶಿ****ಕಾರದ ಶಿವನಿಗೆ ನಮಸ್ಕಾರ.*

**ವಸಿಷ್ಠಕುಂಭೋದ್ಭವಗೌತಮಾದಿ ಮುನೀಂದ್ರದೇವಾರ್ಚಿತಶೇಖರಾಯ।**
**ಚಂದ್ರಾರ್ಕವೈಶ್ವಾನರಲೋಚನಾಯ ತಸ್ಮೈ ವಕಾರಾಯ ನಮಃ ಶಿವಾಯ ॥೪॥**

*ವಸಿಷ್ಠ, ಅಗಸ್ತ್ಯ, ಗೌತಮಾದಿ ಮುನೀಂದ್ರರಿಂದಲೂ ದೇವತೆಗಳಿಂದಲೂ ಪೂಜಿತನಾಗಿ, ಚಂದ್ರಸೂರ್ಯ ಅಗ್ನಿಗಳನ್ನು ಕಣ್ಣುಗಳನ್ನಾಗಿ ಉಳ್ಳವನಾದ* ***ವ****ಕಾರದ ಶಿವನಿಗೆ ನಮಸ್ಕಾರ.*

**ಯಕ್ಷಸ್ವರೂಪಾಯ ಜಟಾಧರಾಯ ಪಿನಾಕಹಸ್ತಾಯ ಸನಾತನಾಯ।**
**ದಿವ್ಯಾಯ ದೇವಾಯ ದಿಗಂಬರಾಯ ತಸ್ಮೈ ಯಕಾರಾಯ ನಮಃ ಶಿವಾಯ ॥೫॥**

***ಯ****ಕ್ಷಸ್ವರೂಪನೂ, ಜಟಾಧರನೂ, ಪಿನಾಕಧಾರಿಯೂ, ಸನಾತನನೂ, ದೇವಲೋಕದ ದೇವನೂ ದಿಗಂಬರನೂ ಆದ* ***ಯ****ಕಾರದ ಶಿವನಿಗೆ ನಮಸ್ಕಾರ.*

**ಪಂಚಾಕ್ಷರಮಿದಂ ಪುಣ್ಯಂ ಯಃ ಪಠೇಚ್ಛಿವಸನ್ನಿಧೌ।**
**ಶಿವಲೋಕಮವಾಪ್ನೋತಿ ಶಿವೇನ ಸಹ ಮೋದತೇ ॥೬॥**

*'ನಮಃ ಶಿವಾಯ' ಎಂಬೀ ಪಂಚಾಕ್ಷರದ ಪುಣ್ಯದ ಈ ಶ್ಲೋಕಗಳನ್ನು ಶಿವನ ಸಂನಿಧಾನ ದಲ್ಲಿ ಜಪಿಸುವವನು ಶಿವನ ಕೃಪೆಗೆ ಪಾತ್ರನಾಗಿ ಶಿವಲೋಕವನ್ನೇ ಹೊಂದುತ್ತಾನೆ.*

# 27. ಪಾರ್ವತೀಪರಮೇಶ್ವರೌ ವಂದೇ

ಕವಿರತ್ನ ಕಾಳಿದಾಸನು ಈಶ್ವರನ ಪರಮಭಕ್ತ. ವಿಶ್ವವಿಖ್ಯಾತವಾದ ತನ್ನ **"ರಘುವಂಶ"** ಮಹಾಕಾವ್ಯದ ಪ್ರಾರಂಭದಲ್ಲಿ ಮಂಗಳಶ್ಲೋಕವನ್ನು ಹಾಡಿದ್ದಾನೆ:

**ವಾಗರ್ಥಾವಿವ ಸಂಪೃಕ್ತೌ ವಾಗರ್ಥಪ್ರತಿಪತ್ತಯೇ।**
**ಜಗತಃ ಪಿತರೌ "ವಂದೇ ಪಾರ್ವತೀಪರಮೇಶ್ವರೌ"॥**

ಪಾರ್ವತೀ ಪರಮೇಶ್ವರರಿಬ್ಬರೂ ಯಾವಾಗಲೂ ಜೊತೆಯಲ್ಲಿ ಕೂಡಿ ಕೊಂಡೇ ಇರುತ್ತಾರೆ. ಇವರಿಬ್ಬರೂ ಈ ಜಗತ್ತಿಗೆ ತಾಯಿ ತಂದೆಯರಾಗಿರುತ್ತಾರೆ. ವಾಕ್ ಮತ್ತು ಅರ್ಥಗಳಂತೆ ಅವರಿಬ್ಬರೂ ನಿತ್ಯಸಂಯುಕ್ತರಾಗಿರುತ್ತಾರೆ. ವಾಕ್ ಮತ್ತು ಅರ್ಥಗಳ ಜ್ಞಾನಕ್ಕಾಗಿ ನಾನು ಇವರಿಬ್ಬರನ್ನೂ ವಂದಿಸುತ್ತೇನೆ.

ಈ ಶ್ಲೋಕದಲ್ಲಿ ಪಾರ್ವತೀ ಪರಮೇಶ್ವರರಿಗೆ **ವಾಗರ್ಥಾವಿವ ಸಂಪೃಕ್ತೌ** ಎಂದೂ **ಜಗತಃ ಪಿತರೌ** ಎಂದೂ ಎರಡು ವಿಶೇಷಣಗಳನ್ನು ವರಕವಿ ಕಾಳಿದಾಸನು ಕೊಟ್ಟಿರುತ್ತಾನೆ. ಇದರ ರಹಸ್ಯವನ್ನು ನೋಡೋಣ. ವಾಕ್ ಎಂದರೆ ಸರಸ್ವತೀ, ವಾಣೀ; ವಾಕ್ ಎಂದರೆ ಮಾತು, ಶಬ್ದ ಎಂದರ್ಥ. ಅರ್ಥವೆಂದರೆ ವಸ್ತು ಎಂದರ್ಥ. ವಾಕ್ ಮತ್ತು ಅರ್ಥಗಳು ಸದಾ ಕೂಡಿಕೊಂಡೇ ಇರುತ್ತವೆ ಯಲ್ಲವೆ? ವಾಕ್ ಇಲ್ಲದೆ ಅರ್ಥವಿಲ್ಲ , ಅರ್ಥವಿಲ್ಲದೆ ವಾಕ್ ಇಲ್ಲ. ವಾಕ್ ಶಬ್ದ ಸ್ತ್ರೀಲಿಂಗ, ಅರ್ಥ ಶಬ್ದ ಪುಲ್ಲಿಂಗ. ವಾಕ್ಕು ಮತ್ತು ಅರ್ಥಗಳು ಸದಾ ಸಂಯುಕ್ತ ವಾಗಿಯೇ ಇರುವಂತೆ ಪಾರ್ವತೀ ಪರಮೇಶ್ವರರು ಸದಾ ಸಂಪೃಕ್ತರಾಗಿಯೇ ಇರುತ್ತಾರೆ. ಒಬ್ಬರನ್ನೊಬ್ಬರು ಬಿಟ್ಟಿರುವಂತೆಯೇ ಇಲ್ಲ. ಪಾರ್ವತೀ ಎಂದ ಕೂಡಲೇ ಪರಮೇಶ್ವರನೂ, ಪರಮೇಶ್ವರ ಎಂದಕೂಡಲೇ ಪಾರ್ವತಿಯೂ ಜೊತೆ ಜೊತೆಯಲ್ಲಿಯೇ ಬರುತ್ತಾರೆ ಎಂದರ್ಥ.

**ಜಗತಃ ಪಿತರೌ**. ಪಾರ್ವತೀ ಪರಮೇಶ್ವರರಿಬ್ಬರೂ ಇಡೀ ಜಗತ್ತಿಗೇ ತಾಯಿ ತಂದೆಯರಾಗಿರುತ್ತಾರೆ; ಎಂದರೆ ಸ್ಥಾವರಜಂಗಮಾತ್ಮಕವಾದ ಇಡೀ ವಿಶ್ವಕ್ಕೇ ಇವರಿಬ್ಬರೂ ಮಾತಾಪಿತೃಗಳಾಗಿರುತ್ತಾರೆ ಎಂದರ್ಥ. ಮೂಲ ಪ್ರಕೃತಿಯೇ ಪಾರ್ವತಿಯಾದರೆ ಮೂಲಪುರುಷನೇ ಪರಮೇಶ್ವರನು. ಹೀಗೆ ಇವರಿಬ್ಬರೂ ಅನ್ಯೋನ್ಯವಾಗಿರುತ್ತಾರೆ. ಇವರಿಬ್ಬರನ್ನೂ ನಾನು ವಂದಿಸುತ್ತೇನೆ ಎಂದು ಕಾಳಿದಾಸನು ಹೇಳಿದ್ದಾನೆ. ಭಕ್ತರಾದ ನಾವುಗಳೂ ಈ ಮಹಾಶಿವರಾತ್ರಿ ಯಂದು ಪಾರ್ವತೀಪರಮೇಶ್ವರರನ್ನು ಈ ದೃಷ್ಟಿಯಿಂದ ಭಾವಿಸಿ ಪೂಜಿಸಬೇಕು. ಅವರಿಬ್ಬರ ಕೃಪಾನುಗ್ರಹದಿಂದ ನಮಗೆ ಸಕಲವಿಧವಾದ ಸಂಪತ್ತೂ ದೊರಕಿ, ಅನಂತರ ನಮಗೆ ಆತ್ಮಜ್ಞಾನವೂ ಉದಯಿಸುವುದರಲ್ಲಿ ಸಂಶಯವಿಲ್ಲ.

# 28. 'ಈಶ್ವರ' ಎಂದರೆ ಶಿವನೇ

ಈಶ, ಈಶ್ವರನೆಂದರೆ ಒಡೆಯ, ಪ್ರಭು, ರಾಜ, ಸಮರ್ಥ—ಎಂದರ್ಥ. ಈ ವಿಶಾಲ ಪ್ರಪಂಚದಲ್ಲಿ ಪ್ರತಿಯೊಬ್ಬನೂ ತನ್ನ ತನ್ನ ಕ್ಷೇತ್ರದಲ್ಲಿ ಈಶನೇ. ಪ್ರತಿಯೊಂದು ಗ್ರಹವೂ ಈಶನೇ, ಪ್ರತಿಯೊಬ್ಬ ದೇವತೆಯೂ ಈಶನೇ. ಏಕೆಂದರೆ ಅವರಿಗೆಲ್ಲ ಒಂದೊಂದು ರೀತಿಯ ಶಕ್ತಿಸಾಮರ್ಥ್ಯಗಳು ಇದ್ದೇ ಇರುತ್ತವೆ. ಆದರೆ ಈ ದೇವತೆಗಳಾರೂ '**ಈಶ್ವರ**'ನಲ್ಲ. ಈಶ್ವರ ಎಂದರೆ **ಈಶನ ಸಮರ್ಥನು** ಎಂದರ್ಥ. ನಿರುಪಚರಿತವಾದ ನಿರಪೇಕ್ಷವಾದ ಈಶನಸಾಮರ್ಥ್ಯವಿರುವುದು **ಈಶ್ವರ**ನೊಬ್ಬನಿಗೇ. ಆದ್ದರಿಂದಲೇ ಅವನು **ಈಶ್ವರ**–ಎನಿಸಿರುತ್ತಾನೆ.

ಹರಿ, ಹರ, ಬ್ರಹ್ಮಾದಿಗಳಿಗೂ, ದೇವಾಧಿದೇವತೆಗಳಿಗೂ ಏಕೈಕ ಈಶ್ವರನೆಂದರೆ **ಈಶ್ವರನೇ**. ಈ **ಈಶ್ವರ** ಎನ್ನುವ ಪದಕ್ಕೆ ಅನ್ವರ್ಥನಾದ ಪರತತ್ತ್ವವೆಂದರೆ **ಈಶ್ವರ**ನೊಬ್ಬನೇ. ಇದನ್ನೇ ಕಾಳಿದಾಸನು ತನ್ನ **ವಿಕ್ರಮೋರ್ವಶೀಯ** ಎಂಬ ನಾಟಕದ ಪ್ರಾರಂಭದಲ್ಲಿ ಹೀಗೆ ಹೇಳಿದ್ದಾನೆ:

**ವೇದಾಂತೇಷು ಯಮಾಹುರೇಕಪುರುಷಂ ವ್ಯಾಪ್ಯ ಸ್ಥಿತಂ ರೋದಸೀ**
**ಯಸ್ಮಿನ್ ಈಶ್ವರ ಇತ್ಯನನ್ಯವಿಷಯಃ ಶಬ್ದೋ ಯಥಾರ್ಥಾಕ್ಷರಃ।**
**ಅಂತರ್ಯಶ್ಚ ಮುಮುಕ್ಷುಭಿರ್ನಿಯಮಿತಪ್ರಾಣಾದಿಭಿರ್ಮೃಗ್ಯತೇ**
**ಸ ಸ್ಥಾಣುಃ ಸ್ಥಿರಭಕ್ತಿಯೋಗಸುಲಭೋ ನಿಶ್ಶ್ರೇಯಸಾಯಾಸ್ತು ವಃ॥**

ವೇದಾಂತಗಳಲ್ಲಿ ಯಾವನನ್ನು **ಪುರುಷ** ಎಂದು ಕರೆಯುತ್ತಾರೆಯೋ, ಯಾವಾತನು ಭೂಮ್ಯಾಕಾಶಗಳೆರಡನ್ನೂ ವ್ಯಾಪಿಸಿ ಸರ್ವವ್ಯಾಪಕನಾಗಿರುತ್ತಾನೆಯೋ, '**ಈಶ್ವರ**' ಎಂಬೀ ಶಬ್ದವು ಯಾವನೊಬ್ಬನಿಗೇ ಯಥಾರ್ಥ, ಅನ್ವರ್ಥವಾಗುತ್ತದೆಯೋ, ಮುಮುಕ್ಷುಗಳು ಅಂತರ್ಮುಖಿಗಳಾಗಿ ಯಾವಾತನನ್ನು ಹುಡುಕುತ್ತಿದ್ದಾರೆಯೋ, ಅವನೇ ಸ್ಥಾಣುವಾದ **ಈಶ್ವರನು**. ಸ್ಥಿರವಾದ ಭಕ್ತಿಯೋಗದಿಂದ ಈ ಈಶ್ವರನನ್ನು ಸುಲಭವಾಗಿ ಪಡೆದುಕೊಳ್ಳಬಹುದು. ಇಂಥ ಪರಮೇಶ್ವರನು ನಿಮ್ಮೆಲ್ಲರಿಗೂ ಮೋಕ್ಷಸಾಮ್ರಾಜ್ಯವನ್ನೇ ಕರುಣಿಸಲಿ.

ಇತರ ದೇವತೆಗಳು ದೊಡ್ಡವರಾಗಿರಬಹುದು, ಸಿದ್ಧ ಪುರುಷರಾಗಿರಬಹುದು, ಆದರೆ ಅವರಾರೂ **ಈಶ್ವರ**ರಲ್ಲ. **ಈಶ್ವರ**—ಎಂದರೆ ಪರಮೇಶ್ವರನೊಬ್ಬನೇ. ಅಂತೂ **ಈಶ್ವರ**ನೆಂದರೆ ಪರಮಶಿವನೊಬ್ಬನೇ. ಇಂದ್ರಿಯಾದಿಗಳನ್ನು ಜಯಿಸಿ, ಚಂಚಲವಾದ ಮನಸ್ಸನ್ನೂ ಜಯಿಸಿ, ಜನ್ಮಜರಾಮರಣಗಳನ್ನೂ ಜಯಿಸಿ, ದೇಶಕಾಲಗಳನ್ನೂ ಜಯಿಸಿ, ಮೃತ್ಯುವನ್ನು ಜಯಿಸಿ, ಸರ್ವಸ್ವತಂತ್ರನಾಗಿ ಮೆರೆಯುತ್ತಿರುವ ಒಬ್ಬನೇ ಒಬ್ಬ ದೇವನೆಂದರೆ **ಈಶ್ವರ**ನೇ. ಸರ್ವಾಂತರ್ಯಾಮಿಯಾದ ಇಂಥವನಿಗೆ ನಮಸ್ಕಾರಗಳು.

## 29. 'ಸಾಕಾರ' ಶಿವನ ಎಂಟು ಲಕ್ಷಣಗಳು

**ಚಿತಾಭಸ್ಮಾಲೇಪೋ ಗರಲಮಶನಂ ದಿಕ್ಪಟಧರೋ**
**ಜಟಾಧಾರೀ ಕಂಠೇ ಭುಜಗಪತಿಹಾರೀ ಪಶುಪತಿಃ।**
**ಕಪಾಲೀ ಭೂತೇಶೋ ಭಜತಿ ಜಗದೀಶೈಕಪದವೀಂ**
**ಭವಾನಿ ತ್ವತ್ಪಾಣಿಗ್ರಹಣಪರಿಪಾಟೀಫಲಮಿದಮ್॥**

1. **ಚಿತಾಭಸ್ಮಾಲೇಪಃ.** ಶಿವನು ಸ್ಮಶಾನವಾಸಿಯಾಗಿದ್ದು, ಅಲ್ಲಿ ಹೆಣ ಸುಟ್ಟ ಬೂದಿಯನ್ನೇ ತನ್ನ ಮೈಗಳಿಗೆಲ್ಲ ಹಚ್ಚಿಕೊಂಡಿರುತ್ತಾನೆ.

2. **ಗರಲಮಶನಮ್.** ಶಿವನಿಗೆ ವಿಷವೇ ಆಹಾರ. ಶಿವನು ವಿರಕ್ತನಾಗಿ ಯಾವ ವಿಷಯಭೋಗಗಳಲ್ಲಿಯೂ ಮಗ್ನನಾಗಿರುವುದಿಲ್ಲ.

3. **ದಿಕ್ಪಟಧರಃ.** ಶಿವನಿಗೆ ದಿಕ್ಕುಗಳೇ ಬಟ್ಟೆಗಳು—ಅಂದರೆ ದಿಗಂಬರ ಎಂದರ್ಥ. ದೇಹಾಭಿಮಾನರಹಿತನಾಗಿ, ಮಾನಾಪಮಾನಗಳಲ್ಲಿ ಸಮನಾಗಿ ದ್ವಂದ್ವಾತೀತನಾಗಿರುವ ಸ್ಥಿತಪ್ರಜ್ಞನೆಂದರೆ ಶಿವನೊಬ್ಬನೇ.

4. **ಜಟಾಧಾರೀ.** ಜಟೆಯನ್ನು ಧರಿಸಿದ್ದಾನೆ. ಕೇಶಶೃಂಗಾರರಹಿತನಾಗಿ ಕೇಶಾಲಂಕಾರವರ್ಜಿತನಾಗಿ ಸದಾ ಆತ್ಮನಿಷ್ಠನಾದವನೆಂದರೆ ಶಿವನೊಬ್ಬನೇ.

5. **ಕಂಠೇ ಭುಜಗಪತಿಹಾರೀ.** ನಾಗರಹಾವುಗಳನ್ನೇ ಕಂಠದಲ್ಲಿ ಹಾರವನ್ನಾಗಿ ಹಾಕಿಕೊಂಡಿರುತ್ತಾನೆ. ಸರ್ಪಭೂಷಣನಾದ ದೇವನೆಂದರೆ ಶಿವನೇ.

6. **ಪಶುಪತಿಃ.** ಸಕಲ ಜೀವರಾಶಿಗಳೂ ಪಶುಸ್ಥಾನೀಯರಾಗಿದ್ದಾರೆ. ಇಂಥ ಸಕಲಪಶುಗಳಿಗೂ ಶಿವನೇ ಪತಿಯಾಗಿರುತ್ತಾನೆ.

7. **ಕಪಾಲೀ.** ಕೈಗಳಲ್ಲಿ ಕಪಾಲವನ್ನು ಧರಿಸಿರುತ್ತಾನೆ.

8. **ಭೂತೇಶ.** ಭೂತಪ್ರೇತಪಿಶಾಚಾದಿಗಳಿಗೆಲ್ಲ ಶಿವನೇ ಈಶನು.

ಇಂಥ ಶಿವನು ಜಗತ್ತಿಗೇ ಈಶ್ವರನಾಗಿ, ಮಹಾಪ್ರಭುವಾಗಿ ಮೆರೆಯುತ್ತಿದ್ದಾನೆ ಎಂದರೆ ಇದು ಭವಾನಿಯ ಪಾಣಿಗ್ರಹಣದಿಂದ ಉಂಟಾದ **ಶುಕ್ರದೆಶೆ.** ಭವಾನಿಯಿಂದ ಭವನಿಗೂ, ಭವನಿಂದ ಭವಾನಿಗೂ ಮೆರಗು ಬಂದಿರುತ್ತದೆ. ಶಿವನು ತ್ಯಾಗಕ್ಕೂ, ವೈರಾಗ್ಯಕ್ಕೂ, ಶಾಂತಿಗೂ, ಸಹಿಷ್ಣುತೆಗೂ, ಸಮಭಾವಕ್ಕೂ, ತಪಸ್ಸಿಗೂ, ಸಹಜಾನಂದಕ್ಕೂ, ಸರಳತೆಗೂ ಆದರ್ಶವಾದ ದೇವನು.

ಭವಾನಿಯ ಪಾಣಿಯನ್ನು ಹಿಡಿದಿದ್ದರಿಂದ ಭವನು ಅತ್ಯಂತ ಎತ್ತರಕ್ಕೆ ಬೆಳೆದುಬಿಟ್ಟನು. ಅಂತೂ ಭವಾನಿಯಿಂದ ಭವನೂ, ಭವನಿಂದ ಭವಾನಿಯೂ ಇಬ್ಬರೂ ಮೆರೆಯುತ್ತಿದ್ದಾರೆ. ಇವರಿಬ್ಬರೂ ಜೊತೆಯಲ್ಲಿ ಸೇರಿಕೊಂಡೇ ಜಗತ್ತಿಗೆ **ತಾಯಿತಂದೆ**ಯರಾಗಿರುತ್ತಾರೆ.

# 30. ಇಂದು, ಮಾಡಬೇಕಾದ 10 ಅನುಷ್ಠಾನಗಳು

ಮಹಾಶಿವರಾತ್ರಿಯ ದಿವಸ ಈ ಹತ್ತು ಅನುಷ್ಠಾನಗಳನ್ನು ಮಾಡಬೇಕು.

1. ಉಷಃಕಾಲದಲ್ಲಿ ಏಳುವಾಗಲೇ 'ಓಂ ನಮಃ ಶಿವಾಯ' ಎಂದು ಉಚ್ಚರಿಸುತ್ತಾ, 'ಶ್ರೀರಾಮ ಜಯರಾಮ ಜಯಜಯರಾಮ' ಎಂದು ಶ್ರೀರಾಮಚಂದ್ರನನ್ನು ಸ್ಮರಿಸುತ್ತಾ ಏಳಬೇಕು.
2. ಶೌಚಾದಿಗಳನ್ನು ಮುಗಿಸಿ, ಸ್ನಾನಸಂಧ್ಯಾದಿ ನಿತ್ಯಕರ್ಮ ಮಾಡಬೇಕು.
3. ಹೆಚ್ಚು ಮೌನಿಯಾಗಿದ್ದು ಶಿವನ ಮಂತ್ರಗಳನ್ನು ಪಠಿಸುತ್ತಿರಬೇಕು.
4. ಬೇಯಿಸಿದ, ಮುಸರೇ ಅನ್ನ ಆಹಾರವನ್ನು ತೆಗೆದುಕೊಳ್ಳಬಾರದು.
5. ಹಸಿವನ್ನು ನೀಗಿಸಿಕೊಳ್ಳಲು ಹಾಲು, ಹಣ್ಣು—ಮುಂತಾದ ಲಘು ಆಹಾರ ವನ್ನು ಮಾತ್ರ ಹಿತಮಿತವಾಗಿ, ಆದಷ್ಟೂ ಕಮ್ಮಿ ತೆಗೆದುಕೊಳ್ಳಬೇಕು.
6. ಸಾಯಂಕಾಲ ಸೂರ್ಯ ಅಸ್ತಮಾನದ ಸಮಯಕ್ಕೆ ಪುನಃ ಸ್ನಾನವನ್ನು ಮಾಡಿ, ಮಡಿಬಟ್ಟೆಯನ್ನು ಉಟ್ಟುಕೊಂಡು ವಿಭೂತಿಯನ್ನು ಹಾಕಿಕೊಂಡು ಸಾಯಂಸಂಧ್ಯಾವಂದನೆಯನ್ನು ಮಾಡಿ, ಅನಂತರ 6 ಗಂಟೆಗೆ ಸರಿಯಾಗಿ ಶಿವಲಿಂಗಕ್ಕೆ ಧ್ಯಾನಾವಾಹನಾದಿ ಪೂಜೆಯನ್ನು ಮಾಡಬೇಕು. ವಿಶೇಷವಾಗಿ ರುದ್ರಾಧ್ಯಾಯದಿಂದ ಶಿವಲಿಂಗಕ್ಕೆ ಅಭಿಷೇಕವನ್ನು ಮಾಡಬೇಕು. ಅವಕಾಶ ವಿದ್ದರೆ ಮಹಾನ್ಯಾಸಪೂರ್ವಕವಾಗಿಯೇ ಪೂಜೆಯನ್ನು ಮಾಡಬಹುದು.
7. ಭಸ್ಮದಿಂದ, ಪಂಚಾಮೃತಗಳಿಂದ ಹಾಗೂ ಶುದ್ಧೋದಕದಿಂದ ಅಭಿಷೇಕ ವನ್ನು ಮಾಡಿದ ಬಳಿಕ ಶಿವಲಿಂಗಕ್ಕೆ **ತ್ರಿದಳ ಬಿಲ್ವಪತ್ರೆ**ಗಳಿಂದ ಅಷ್ಟೋತ್ತರ ಶತ, ಸಹಸ್ರನಾಮಗಳಿಂದ ಪೂಜೆಯನ್ನು ಶ್ರದ್ಧೆಯಿಂದ ಮಾಡಬೇಕು.
8. ಇಡೀ ರಾತ್ರಿ ಎಚ್ಚರವಾಗಿದ್ದು ಶಿವನ ಮಂತ್ರ, ಶಿವನ ಸ್ತೋತ್ರ, ಶಿವನ ಭಜನೆ, ಶಿವನ ನಾಮಸ್ಮರಣೆಗಳನ್ನು ಶ್ರದ್ಧೆಯಿಂದ ಮಾಡಬೇಕು.
9. ಸಾಯಂಕಾಲ 6 ರಿಂದ ಮಾರನೇದಿನ ಬೆಳಗ್ಗೆ 6 ರ ವರೆಗೂ ಶಿವನನ್ನೇ ಸ್ಮರಿಸುತ್ತಾ ಉಪವಾಸ ಮಾಡಬೇಕು.
10. ನಾಲ್ಕು ಜಾವಗಳಲ್ಲೂ ಶಿವನಿಗೆ ಅಭಿಷೇಕವನ್ನು ಮಾಡಬೇಕು.

ಶಿವನ ಗುಣಲೀಲೆಗಳನ್ನು ಧ್ಯಾನಮಾಡುತ್ತಾ ಶಿವನ ಚಿಂತನೆಯಲ್ಲಿಯೇ ಮುಳುಗಿರಬೇಕು. ಮಾರನೇದಿವಸ ಅವಭೃಥ ಸ್ನಾನವನ್ನು ಮಾಡಬೇಕು. ಅನಂತರ ಸಂಧ್ಯಾದಿಗಳನ್ನು ಪೂರೈಸಿ, ಆಮೇಲೆ ಲಘು ಉಪಹಾರವನ್ನೋ ಊಟವನ್ನೋ ಮಾಡಬೇಕು.

## 31. ಜ್ಞಾನಂ ಮಹೇಶ್ವರಾದಿಚ್ಛೇತ್

ಶಿವನು ಮಂಗಳದೇವತೆ, ಶಿವನು ದಕ್ಷಿಣಾಮೂರ್ತಿಸ್ವರೂಪ, ಶಿವನು ಆತ್ಮಜ್ಞಾನದ ಸಾಕಾರಮೂರ್ತಿ, ಶಿವನು ಸರಳ ದೇವತೆ, ಶಿವನು ಸುಲಭವಾಗಿ ಆರಾಧಿಸಲ್ಪಡುವ ದೇವತೆ, ಶಿವನು ಸದ್ಯಃಫಲದಾತೃದೇವತೆ. ಇಂಥ ಶಿವನನ್ನು ಭಕ್ತರು ಆರಾಧಿಸಿದರೆ ತನ್ನ ಭಕ್ತರಿಗೆ ಶಿವನು ಆತ್ಮಜ್ಞಾನವನ್ನೇ ಕೊಡುತ್ತಾನೆ. ಆತ್ಮಜ್ಞಾನವು ಪ್ರಾಪ್ತವಾಯಿತೆಂದರೆ ಮುಕ್ತಿಯು ದೊರಕಿದಂತೆಯೇ.

ಸಂನ್ಯಾಸಿಗಳು ಎಂದರೇ ಮುಮುಕ್ಷುಸಾಧಕರಲ್ಲವೆ? ಇವರಿಗೆ ಬೇಕಾದದ್ದು ಮುಕ್ತಿಸಾಮ್ರಾಜ್ಯ. ಮುಕ್ತಿಯು ಅಂಗಡಿಗಳಲ್ಲಿ ಹಣಕ್ಕೆ ಸಿಗುವ ವಸ್ತುವಲ್ಲ. ಮುಕ್ತಿಯೇ ಬೇಕೆಂದರೆ ಅಂಥವರು ಆತ್ಮಜ್ಞಾನವನ್ನೇ ಪಡೆಯಬೇಕಲ್ಲವೆ? ಯತಿಗಳಿಗೆ ಅಂಥ ಆತ್ಮಜ್ಞಾನವು ಯಾರಿಂದ ದೊರಕುತ್ತದೆ? ಎಂದರೆ, ಶಿವನಿಂದ. ಜ್ಞಾನನಿಧಿಯಾದ ಶಂಕರನ ಆರಾಧನೆಯಿಂದ ಯತಿಗಳಿಗೆ ಆತ್ಮಜ್ಞಾನವೇ ದೊರಕುತ್ತದೆ. ಚಿನ್ಮಾತ್ರಸ್ವರೂಪನಾದ ಆತ್ಮನೇ ತಾನು, ಜಡವಾದ ದೇಹಾದಿಗಳು ತಾನಲ್ಲ—ಎನ್ನುವ ನಿಶ್ಚಿತವಾದ ಅರಿವೇ ಆತ್ಮಜ್ಞಾನವು.

ಆತ್ಮಜ್ಞಾನವೆಂಬುದು ಕೇವಲ ಪುಸ್ತಕದ ಬದನೆಕಾಯಲ್ಲ; ಪುಸ್ತಕದ ವಿದ್ಯೆಯನ್ನು ಮಸ್ತಕದಲ್ಲಿ ತುಂಬಿಕೊಂಡರೆ ಅವನೇನು ಆತ್ಮಜ್ಞಾನಿ ಎನಿಸಲಾರನು. ಮತ್ತೇನೆಂದರೆ ಆ ಜ್ಞಾನವು ಸ್ವಾನುಭವದಲ್ಲಿ ಪರಿಪಾಕಗೊಳ್ಳಬೇಕಲ್ಲವೆ? ಈ ಆತ್ಮಜ್ಞಾನವನ್ನು ಸಾಧಕರು ಶಂಕರನ ಅನುಗ್ರಹದಿಂದಲೇ ಹೊಂದಬೇಕು. ವಿರಕ್ತ ಚಕ್ರವರ್ತಿಯೂ ದಕ್ಷಿಣಾಮೂರ್ತಿಯೂ ಬಾಲಗುರುವೂ ಆಧ್ಯಾತ್ಮಿಕಸದ್ಗುರುವೂ ಆದ ಶಿವನ ಉಪಾಸನೆಯಿಂದ ಆತ್ಮಜ್ಞಾನವು ದೊರಕುವುದರಲ್ಲಿ ಸಂಶಯ ಉಂಟೆ? ಶಿವನ ಕೃಪಾನುಗ್ರಹದಿಂದ ಲೌಕಿಕ ವಿದ್ಯೆಗಳೂ ಲಭಿಸುತ್ತವೆ.

ಯಾವ ದೇವರಿಂದ ಯಾವ ಫಲವಾಗುತ್ತದೆ? ಎಂಬುದನ್ನು ತಿಳಿಯೋಣ:

**ಆರೋಗ್ಯಂ ಭಾಸ್ಕರಾದಿಚ್ಛೇತ್ ಧನಮಿಚ್ಛೇತ್ ಹುತಾಶನಾತ್।**
**ಜ್ಞಾನಂ ಮಹೇಶ್ವರಾದಿಚ್ಛೇತ್ ಮೋಕ್ಷಮಿಚ್ಛೇತ್ ಜನಾರ್ದನಾತ್॥**

ಸೂರ್ಯನ ನಮಸ್ಕಾರದಿಂದ ಆರೋಗ್ಯವನ್ನೂ, ಯಜ್ಞೇಶ್ವರನ ಆರಾಧನೆಯಿಂದ ಧನವನ್ನೂ, ಮಹೇಶ್ವರನ ಪೂಜೆಯಿಂದ ಜ್ಞಾನವನ್ನೂ, ವಿಷ್ಣುವಿನಿಂದ ಮೋಕ್ಷವನ್ನೂ ಹೊಂದುತ್ತೇವೆ.

ಸರ್ವಸಮರ್ಥನೂ, ಸರ್ವೈಶ್ವರ್ಯಗಳಿಗೂ ಒಡೆಯನೂ, ಭಕ್ತಾನುಕಂಪಿಯೂ ಆಗಿರುವ ಪರಮಶಿವನ ಆರಾಧನೆಯಿಂದ ಮಾನವರಿಗೆ ಸಕಲ ಸಂಪತ್ತುಗಳೂ ಪ್ರಾಪ್ತವಾಗುತ್ತವೆ. ಆದರೆ ಅಧ್ಯಾತ್ಮಜ್ಞಾನಪಿಪಾಸುಗಳಿಗೆ ಆತ್ಮಜ್ಞಾನವೆಂಬ ಮಹತ್ತರ ಫಲವು ಲಭಿಸುತ್ತದೆ ಎಂದಭಿಪ್ರಾಯ.

# 32. ಶಿವನು ವಿಷವನ್ನು ಕುಡಿದದ್ದು ಏಕೆ?

ಶಿವನು ವಿಷವನ್ನು ಪಾನಮಾಡಿದ್ದಕ್ಕೆ ಒಬ್ಬ ಕವಿ ತನ್ನ ಕವಿತಾಸಾಮರ್ಥ್ಯ ದಿಂದ ಬೇರೊಂದು ರೀತಿಯಲ್ಲಿ ಅರ್ಥವನ್ನು ಕಲ್ಪಿಸಿರುತ್ತಾನೆ. ಇದು ಕವಿಯ ಕಲ್ಪನಾಸಾಮರ್ಥ್ಯವೆಂದು ತಿಳಿಯೋಣ. ಇದು ಹೇಳುವುದಕ್ಕೂ ಕೇಳುವುದಕ್ಕೂ ವರ್ಣಿಸುವುದಕ್ಕೂ 'ಮಜಾ' ಎನಿಸುತ್ತದೆ. ಕವಿಯ ಕಲ್ಪನೆಯಂತೆ ಶಿವನು ವಿಷ ವನ್ನು ಕುಡಿದದ್ದು ಏಕೆಂದರೆ, ತನ್ನ ಸಂಸಾರದ ಒಳಜಗಳದಿಂದ ಬೇಸರಗೊಂಡದ್ದ ರಿಂದ. ಸರಿ, ಶಿವನ ಕುಟುಂಬದಲ್ಲಿ ಆ ಒಳಜಗಳ ಹೇಗಿತ್ತು? ಎಂದರೆ:

**ಅತ್ತುಂ ವಾಂಛತಿ ವಾಹನಂ ಗಣಪತೇಃ ಆಖುಂ ಕ್ಷುಧಾರ್ತಃ ಫಣೀ**
**ತಂ ಚ ಕ್ರೌಂಚಪತೇಃ ಶಿಖೀ ಚ ಗಿರಿಜಾಸಿಂಹೋऽಪಿ ನಾಗಾನನಮ್।**
**ಗೌರೀ ಜಹ್ನುಸುತಾಮಸೂಯತಿ ಕಲಾನಾಥಂ ಕಪಾಲಾನನೋ**
**ನಿರ್ವಿಣ್ಣಃ ಸ ಪಪೌ ಕುಟುಂಬಕಲಹಾತ್ ಈಶೋऽಪಿ ಹಾಲಾಹಲಮ್॥**

ಶಿವನ ಕಂಠದಲ್ಲಿರುವ ಸರ್ಪವು ಗಣಪತಿಯ ವಾಹನವಾಗಿರುವ ಇಲಿಯನ್ನು ತಿನ್ನುವುದಕ್ಕೆ ಬರುವುದರಿಂದ ಗಣಪತಿಯು ತಂದೆಯ ಬಳಿಗೆ ಹೋಗುವಂತಿಲ್ಲ. ಶಿವನ ಆ ಸರ್ಪವನ್ನು ತಿನ್ನಲು ಷಣ್ಮುಖಸ್ವಾಮಿಯ ವಾಹನವಾದ ನವಿಲು ಪ್ರಯತ್ನವನ್ನು ಮಾಡುವುದರಿಂದ ತಂದೆ ಮಕ್ಕಳು ಒಟ್ಟಿಗೇ ಇರುವಂತಿಲ್ಲ. ಗಿರಿಜೆಯ ವಾಹನವಾದ ಸಿಂಹವು ಗಜಮುಖನನ್ನೇ ತಿನ್ನಲು ಬರುತ್ತದೆ. ಶಿವನ ತೊಡೆಯ ಮೇಲೆ ಕೂತಿರುವ ಗೌರಿಯು, ಶಿವನ ತಲೆಯ ಮೇಲೆ ಕುಳಿತಿರುವ ಗಂಗೆಯನ್ನು ಯಾವಾಗಲೂ ಮಾತ್ಸರ್ಯದಿಂದ ನೋಡುತ್ತಿರುತ್ತಾಳೆ. ಗಂಗೆಯು ಗೌರಿಯನ್ನೂ ಮಾತ್ಸರ್ಯದಿಂದಲೇ ನೋಡುತ್ತಾಳೆ. ಇದು ಸವತಿಯರ ಒಳಜಗಳ. ಇನ್ನು ಕಪಾಲಾನನವು ಶಿವನ ತಲೆಯ ಮೇಲಿರುವ ಚಂದ್ರನನ್ನು ನೋಡುತ್ತಾ ದ್ವೇಷಿಸುತ್ತಿರುತ್ತದೆ.

ಹೀಗೆ ತಂದೆ ಮಕ್ಕಳ ಜಗಳ, ಮಕ್ಕಳಿಬ್ಬರ ಜಗಳ, ತಾಯಿಮಕ್ಕಳ ಜಗಳ, ತನ್ನ ಇಬ್ಬರು ಪತ್ನಿಯರಲ್ಲಿ ಸವತಿಯರ ಜಗಳ, ವಾಹನಗಳ ಪರಸ್ಪರ ದ್ವೇಷ, ವೃಷಭ, ಸಿಂಹ, ಆನೆ, ಇಲಿ, ನವಿಲುಗಳ ಪರಸ್ಪರ ದ್ವೇಷ, ಚಂದ್ರಕಪಾಲಗಳಿಗೆ ಜಗಳ—ಹೀಗೆ ಶಿವನ ಕುಟುಂಬದಲ್ಲಿ ಕ್ಷಣಕ್ಷಣದಲ್ಲೂ ಜಗಳವೇ ನಡೆಯುತ್ತಿತ್ತು. ಇದನ್ನು ನೋಡೀ ನೋಡೀ ಬೇಸತ್ತು, ಬೇಜಾರಿನಿಂದ ಉಪಾಯಾಂತರವನ್ನು ಕಾಣದೇ, ಅಯ್ಯೋ ಪಾಪ, ಆ ಸಮರ್ಥನಾದ ಈಶ್ವರನೂ ಕೊನೆಗೆ ವಿಷವನ್ನು ಕುಡಿಯಬೇಕಾಗಿ ಬಂತಲ್ಲಾ! ಎಂಥ ದುರ್ಗತಿಯಿದು! ಸಂಸಾರ ಎಂದಮೇಲೆ —ಎಲ್ಲರದ್ದೂ ಇಷ್ಟೇ. ಸದ್ಯ, ನಮ್ಮ ಸಂಸಾರವು ಶಿವನ ಸಂಸಾರಕ್ಕಿಂತ ಸಾವಿರಪಾಲು ಚೆನ್ನಾಗಿದೆಯಲ್ಲಾ! ಇದಕ್ಕೆ ಶಿವನ ಅನುಗ್ರಹವೇ ಕಾರಣ.

# 33. ದ್ವಾದಶಜ್ಯೋತಿರ್ಲಿಂಗಸ್ತೋತ್ರಮ್

ಸೌರಾಷ್ಟ್ರದೇಶೇ ವಿಶದೇಽತಿರಮ್ಯೇ ಜ್ಯೋತಿರ್ಮಯಂ ಚಂದ್ರಕಲಾವತಂಸಮ್।
ಭಕ್ತಿಪ್ರದಾನಾಯ ಕೃಪಾವತೀರ್ಣಂ ತಂ ಸೋಮನಾಥಂ ಶರಣಂ ಪ್ರಪದ್ಯೇ ॥೧॥

ಶ್ರೀಶೈಲಶೃಂಗೇ ವಿಬುಧಾತಿಸಂಗೇ ತುಲಾದ್ರಿತುಂಗೇಽಪಿ ಮುದಾ ವಸಂತಮ್।
ತಮರ್ಜುನಂ ಮಲ್ಲಿಕಪೂರ್ವಮೇಕಂ ನಮಾಮಿ ಸಂಸಾರಸಮುದ್ರಸೇತುಮ್ ॥೨

ಅವಂತಿಕಾಯಾಂ ವಿಹಿತಾವತಾರಂ ಮುಕ್ತಿಪ್ರದಾನಾಯ ಚ ಸಜ್ಜನಾನಾಮ್।
ಅಕಾಲಮೃತ್ಯೋಃ ಪರಿರಕ್ಷಣಾರ್ಥಂ ವಂದೇ ಮಹಾಕಾಲಮಹಾಸುರೇಶಮ್॥ ೩ ॥

ಕಾವೇರಿಕಾನರ್ಮದಯೋಃ ಪವಿತ್ರೇ ಸಮಾಗಮೇ ಸಜ್ಜನತಾರಣಾಯ।
ಸದೈವ ಮಾಂಧಾತೃಪುರೇ ವಸಂತಮೋಂಕಾರಮೀಶಂ ಶಿವಮೇಕಮೀಡೇ ॥ ೪ ॥

ಪೂರ್ವೋತ್ತರೇ ಪ್ರಜ್ವಲಿಕಾನಿಧಾನೇ ಸದಾ ವಸಂತಂ ಗಿರಿಜಾಸಮೇತಮ್।
ಸುರಾಸುರಾರಾಧಿತಪಾದಪದ್ಮಂ ಶ್ರೀವೈದ್ಯನಾಥಂ ತಮಹಂ ನಮಾಮಿ ॥ ೫ ॥

ಯಾಮ್ಯೇ ಸದಂಗೇ ನಗರೇಽತಿರಮ್ಯೇ ವಿಭೂಷಿತಾಂಗಂ ವಿವಿಧೈಶ್ಚ ಭೋಗೈಃ।
ಸದ್ಭಕ್ತಿಮುಕ್ತಿಪ್ರದಮೀಶಮೇಕಂ ಶ್ರೀನಾಗನಾಥಂ ಶರಣಂ ಪ್ರಪದ್ಯೇ ॥ ೬ ॥

ಮಹಾದ್ರಿಪಾರ್ಶ್ವೇ ಚ ತಟೇ ರಮಂತಂ ಸಂಪೂಜ್ಯಮಾನಂ ಸತತಂ ಮುನೀಂದ್ರೈಃ।
ಸುರಾಸುರೈರ್ಯಕ್ಷಮಹೋರಗಾದ್ಯೈಃ ಕೇದಾರಮೀಶಂ ಶಿವಮೇಕಮೀಡೇ ॥ ೭ ॥

ಸಹ್ಯಾದ್ರಿಶೀರ್ಷೇ ವಿಮಲೇ ವಸಂತಂ ಗೋದಾವರೀತೀರಪವಿತ್ರದೇಶೇ।
ಯದ್ದರ್ಶನಾತ್ಪಾತಕಮಾಶು ನಾಶಂ ಪ್ರಯಾತಿ ತಂ ತ್ರ್ಯಂಬಕಮೀಶಮೀಡೇ ॥ ೮ ॥

ಸುತಾಮ್ರಪರ್ಣೀಜಲರಾಶಿಯೋಗೇ ನಿಬಧ್ಯ ಸೇತುಂ ವಿಶಿಖೈರಸಂಖ್ಯೈಃ।
ಶ್ರೀರಾಮಚಂದ್ರೇಣ ಸಮರ್ಪಿತಂ ತಂ ರಾಮೇಶ್ವರಾಖ್ಯಂ ನಿಯತಂ ನಮಾಮಿ॥

ಯಂ ಡಾಕಿನೀಶಾಕಿನಿಕಾಸಮಾಜೇ ನಿಷೇವ್ಯಮಾಣಂ ಪಿಶಿತಾಶನೈಶ್ಚ।
ಸದೈವ ಭೀಮಾದಿಪದಪ್ರಸಿದ್ಧಂ ತಂ ಶಂಕರಂ ಭಕ್ತಹಿತಂ ನಮಾಮಿ ॥೧೦॥

ಸಾನಂದಮಾನಂದವನೇ ವಸಂತಮಾನಂದಕಂದಂ ಹತಪಾಪವೃಂದಮ್।
ವಾರಾಣಸೀನಾಥಮನಾಥನಾಥಂ ಶ್ರೀವಿಶ್ವನಾಥಂ ಶರಣಂ ಪ್ರಪದ್ಯೇ ॥೧೧॥

ಇಲಾಪುರೇ ರಮ್ಯವಿಶಾಲಕೇಽಸ್ಮಿನ್ ಸಮುಲ್ಲಸಂತಂ ಚ ಜಗದ್ವರೇಣ್ಯಮ್।
ವಂದೇ ಮಹೋದಾರತರಸ್ವಭಾವಂ ಘೃಷ್ಣೇಶ್ವರಾಖ್ಯಂ ಶರಣಂ ಪ್ರಪದ್ಯೇ ॥೧೨॥

ಜ್ಯೋತಿರ್ಮಯದ್ವಾದಶಲಿಂಗಕಾನಾಂ ಶಿವಾತ್ಮನಾಂ ಪ್ರೋಕ್ತಮಿದಂ ಕ್ರಮೇಣ।
ಸ್ತೋತ್ರಂ ಪಠಿತ್ವಾ ಮನುಜೋಽತಿಭಕ್ತ್ಯಾ ಫಲಂ ತದಾಲೋಕ್ಯ ನಿಜಂ ಭಜೇಚ್ಚ॥

ಇತಿ ಶ್ರೀದ್ವಾದಶಜ್ಯೋತಿರ್ಲಿಂಗಸ್ತೋತ್ರಂ ಸಂಪೂರ್ಣಮ್

# 34. ಏಕಬಿಲ್ವಂ ಶಿವಾರ್ಪಣಮ್

ಈ ಶ್ಲೋಕಗಳನ್ನು ಶಿವನ ಸಂನಿಧಾನದಲ್ಲಿ ಪಠಿಸಬೇಕು.

ತ್ರಿದಳಂ ತ್ರಿಗುಣಾಕಾರಂ ತ್ರಿಣೇತ್ರಂ ಚ ತ್ರಿಯಾಯುಧಮ್ ।
ತ್ರಿಜನ್ಮಪಾಪಸಂಹಾರ**ಮೇಕಬಿಲ್ವಂ** ಶಿವಾರ್ಪಣಮ್ ॥

ತ್ರಿಶಾಖೈರ್ಬಿಲ್ವಪತ್ರೈಶ್ಚ ಅಚ್ಛಿದ್ರೈಃ ಕೋಮಲೈಶ್ಶುಭೈಃ ।
ತವ ಪೂಜಾಂ ಕರಿಷ್ಯಾಮಿ **ಏಕಬಿಲ್ವಂ** ಶಿವಾರ್ಪಣಮ್ ॥

ದರ್ಶನಂ ಬಿಲ್ವವೃಕ್ಷಸ್ಯ ಸ್ಪರ್ಶನಂ ಪಾಪನಾಶನಮ್ ।
ಅಘೋರಪಾಪಸಂಹಾರ**ಮೇಕಬಿಲ್ವಂ** ಶಿವಾರ್ಪಣಮ್ ॥

ಕಾಶೀಕ್ಷೇತ್ರನಿವಾಸಂ ಚ ಕಾಲಭೈರವದರ್ಶನಮ್ ।
ಪ್ರಯಾಗೇ ಮಾಧವಂ ದೃಷ್ಟ್ವಾ **ಏಕಬಿಲ್ವಂ** ಶಿವಾರ್ಪಣಮ್ ॥

ತುಲಸೀ ಬಿಲ್ವನಿರ್ಗುಂಡೀಜಂಬೀರಾಮಲಕಂ ತಥಾ ।
ಪಂಚಬಿಲ್ವಮಿತಿ ಖ್ಯಾತ**ಮೇಕಬಿಲ್ವಂ** ಶಿವಾರ್ಪಣಮ್ ॥

ತಟಾಕಂ ಧನನಿಕ್ಷೇಪಂ ಬ್ರಹ್ಮಸ್ಥಾಪ್ಯಂ ಶಿವಾಲಯಮ್ ।
ಕೋಟಿಕನ್ಯಾಮಹಾದಾನ**ಮೇಕಬಿಲ್ವಂ** ಶಿವಾರ್ಪಣಮ್ ॥

ದಂತ್ಯಶ್ವಕೋಟಿದಾನಾನಿ ಅಶ್ವಮೇಧಶತಾನಿ ಚ ।
ಕೋಟಿವಿಪ್ರಾನ್ನದಾನಂ ಚ **ಏಕಬಿಲ್ವಂ** ಶಿವಾರ್ಪಣಮ್ ॥

ಸಾಲಗ್ರಾಮಸಹಸ್ರಾಣಿ ವಿಪ್ರಾನ್ನಂ ಶತಕೋಟಿಕಮ್ ।
ಯಜ್ಞಕೋಟಿಸಹಸ್ರಾಣಿ **ಏಕಬಿಲ್ವಂ** ಶಿವಾರ್ಪಣಮ್ ॥

ಅಜ್ಞಾನೇನ ಕೃತಂ ಪಾಪಂ ಜ್ಞಾನೇನಾಪಿ ಕೃತಂ ಚ ಯತ್ ।
ತತ್ಸರ್ವಂ ನಾಶಮಾಯಾತು **ಏಕಬಿಲ್ವಂ** ಶಿವಾರ್ಪಣಮ್ ॥

ಏಕೈಕಬಿಲ್ವಪತ್ರೇಣ ಕೋಟಿಯಜ್ಞಫಲಂ ಲಭೇತ್ ।
ಮಹಾದೇವಸ್ಯ ಪೂಜಾರ್ಥ**ಮೇಕಬಿಲ್ವಂ** ಶಿವಾರ್ಪಣಮ್ ॥

ಅಮೃತೋದ್ಭವವೃಕ್ಷಸ್ಯ ಮಹಾದೇವಪ್ರಿಯಸ್ಯ ಚ ।
ಮುಚ್ಯಂತೇ ಕಂಟಕಾಘಾತಾತ್ಕಂಟಕೇಭ್ಯೋ ಹಿ ಮಾನವಾಃ ॥

# 35. ಲಿಂಗಾಷ್ಟಕಮ್

ಬ್ರಹ್ಮಮುರಾರಿಸುರಾರ್ಚಿತಲಿಂಗಂ ನಿರ್ಮಲಭಾಸಿತಶೋಭಿತಲಿಂಗಮ್ ।
ಜನ್ಮಜದುಃಖವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೧ ॥

ದೇವಮುನಿಪ್ರವರಾರ್ಚಿತಲಿಂಗಂ ಕಾಮದಹನಕರುಣಾಕರಲಿಂಗಮ್ ।
ರಾವಣದರ್ಪವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೨ ॥

ಸರ್ವಸುಗಂಧಸುಲೇಪಿತಲಿಂಗಂ ಬುದ್ಧಿವಿವರ್ಧನಕಾರಣಲಿಂಗಮ್ ।
ಸಿದ್ಧಸುರಾಸುರಸೇವಿತಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೩ ॥

ಕನಕಮಹಾಮಣಿಭೂಷಿತಲಿಂಗಂ ಫಣಿಪತಿವೇಷ್ಟಿತಶೋಭಿತಲಿಂಗಮ್ ।
ದಕ್ಷಸುಯಜ್ಞವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೪ ॥

ಕುಂಕುಮಚಂದನಲೇಪಿತಲಿಂಗಂ ಪಂಕಜಹಾರಸುಶೋಭಿತಲಿಂಗಂ
ಸಂಚಿತಪಾಪವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೫ ॥

ದೇವಗಣಾರ್ಚಿತಸೇವಿತಲಿಂಗಂ ಭಾವೈರ್ಭಕ್ತಿಭಿರರ್ಚಿತಲಿಂಗಮ್ ।
ದಿನಕರಕೋಟಿಪ್ರಭಾಕರಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೬ ॥

ಅಷ್ಟದಲೋಪರಿವೇಷ್ಟಿತಲಿಂಗಂ ಸರ್ವಸಮುದ್ಭವಕಾರಣಲಿಂಗಮ್ ।
ಅಷ್ಟದರಿದ್ರವಿನಾಶಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೭ ॥

ಸುರಗುರುಸುರವರಪೂಜಿತಲಿಂಗಂ ಸುರವನಪುಷ್ಪಸದಾರ್ಚಿತಲಿಂಗಮ್ ।
ಪರಮಪರಂಪರಮಾತ್ಮಕಲಿಂಗಂ ತತ್ಪ್ರಣಮಾಮಿ ಸದಾಶಿವಲಿಂಗಮ್ ॥ ೮ ॥

ಲಿಂಗಾಷ್ಟಕಮಿದಂ ಪುಣ್ಯಂ ಯಃ ಪಠೇತ್ ಶಿವಸಂನಿಧೌ ।
ಶಿವಲೋಕಮವಾಪ್ನೋತಿ ಶಿವೇನ ಸಹ ಮೋದತೇ ॥

*೧. ಬ್ರಹ್ಮ ವಿಷ್ಣು ಮೊದಲಾದ ದೇವತೆಗಳಿಂದ ಪೂಜಿತನಾದ, ಪರಿಶುದ್ಧ ವಿಭೂತಿಯಿಂದ ಶೋಭಿಸುವ, ಜನ್ಮಲಬ್ಧವಾದ ದುಃಖಗಳನ್ನು ಕಳೆಯುವ ಸದಾಶಿವಲಿಂಗವನ್ನು ವಂದಿಸುತ್ತೇನೆ. ೨. ಶ್ರೇಷ್ಠರಾದ ದೇವರ್ಷಿಗಳಿಂದ ಪೂಜಿತನಾದ, ಮನ್ಮಥನನ್ನು ದಹಿಸಿದ, ದಯಾಕರನಾದ, ರಾವಣನ ದರ್ಪವನ್ನು ನಾಶಗೊಳಿಸಿದ ಸದಾಶಿವಮೂರ್ತಿಯನ್ನು ನಮಸ್ಕರಿಸುತ್ತೇನೆ. ೩. ಸುಗಂಧ ಭಸ್ಮವನ್ನು ಬಳಿದುಕೊಂಡಿರುವ, ಬುದ್ಧಿಯ ಬೆಳವಣಿಗೆಗೆ ಕಾರಣನಾದ, ದೇವದಾನವಸಿದ್ಧರಿಂದ ವಂದಿತನಾದ ಸದಾಶಿವಲಿಂಗವನ್ನು ನಮಿಸುತ್ತೇನೆ. ೪. ಅನರ್ಘ್ಯವಾದ ರತ್ನಾಭರಣಗಳಿಂದ ಅಲಂಕೃತನಾದ, ಸುತ್ತಿಕೊಂಡಿರುವ ನಾಗರಾಜನಿಂದ ಶೋಭಿಸುವ, ದಕ್ಷನ ಯಜ್ಞವನ್ನು ನಾಶ ಗೊಳಿಸಿದ ಸದಾಶಿವಲಿಂಗಕ್ಕೆ ಪ್ರಣಾಮಮಾಡುತ್ತೇನೆ. ೫. ಕುಂಕುಮಗಂಧದಿಂದ ಲೇಪಿತವಾದ, ಕಮಲಪುಷ್ಪದ ಹಾರದಿಂದ ಶೋಭಿಸುವ, ಸಂಚಿತವಾದ ಪಾಪಗಳನ್ನು ಕಳೆಯುವ ಸದಾ ಶಿವಲಿಂಗಕ್ಕೆ ಎರಗುವೆನು. ೬. ದೇವಗಣಗಳು ಸೇವಿಸಿ ಪೂಜಿಸುತ್ತಿರುವ, ಭಾವುಕರಾದ ಭಕ್ತರು ಭಕ್ತಿಭಾವದಿಂದ ಪೂಜೆಮಾಡುತ್ತಿರುವ, ಕೋಟಿಸೂರ್ಯಪ್ರಕಾಶಮಾನವಾದ ಸದಾಶಿವಲಿಂಗವನ್ನು ವಂದಿಸುತ್ತೇನೆ. ೭. ಅಷ್ಟದಲಪದ್ಮಗಳಿಂದಾವೃತನಾದ, ಸೃಷ್ಟಿಯ ಎಲ್ಲ ಉತ್ಪತ್ತಿಗೂ ಕಾರಣನಾದ, ಅಷ್ಟದರಿದ್ರವನ್ನೂ ಹೋಗಲಾಡಿಸುವ ಸದಾಶಿವಲಿಂಗವನ್ನು ನಮಸ್ಕರಿಸುತ್ತೇನೆ. ೮. ದೇವಗುರು ವಾದ ಬೃಹಸ್ಪತಿ, ದೇವೇಂದ್ರ ಅವರುಗಳಿಂದ ಪೂಜಿತನೂ ದೇವತೆಗಳ ನಂದನವನದ ಹೂಗಳಿಂದ ಪೂಜಿತನೂ, ಸರ್ವೋತ್ತಮನೂ, ಪರಮಾತ್ಮನೂ ಆದ ಸದಾಶಿವಲಿಂಗವನ್ನು ನಮಿಸುತ್ತೇನೆ.*

# 36. ದಕ್ಷಿಣಾಮೂರ್ತಿಯ ಮಹಿಮೆ

ಪರಮಶಿವನು **ದಕ್ಷಿಣಾಮೂರ್ತಿ** ರೂಪದಿಂದ ತೋರಿಕೊಂಡು ಸನಕಾದಿ ಮಹರ್ಷಿಗಳಿಗೆ ಮೌನದಿಂದಲೇ ಆತ್ಮಜ್ಞಾನವನ್ನು ಉಪದೇಶಮಾಡಿದನು. ಈ ಕೆಳಗಿನ ಶ್ಲೋಕಗಳಲ್ಲಿ ದಕ್ಷಿಣಾಮೂರ್ತಿಯ ಸ್ವರೂಪವನ್ನು ತಿಳಿಸಿದೆ:

**ಮೌನವ್ಯಾಖ್ಯಾಪ್ರಕಟಿತಪರಬ್ರಹ್ಮತತ್ತ್ವಂ ಯುವಾನಂ**
**ವರ್ಷಿಷ್ಠಾಂತೇ ವಸದೃಷಿಗಣೈರಾವೃತಂ ಬ್ರಹ್ಮನಿಷ್ಠೈಃ।**
**ಆಚಾರ್ಯೇಂದ್ರಂ ಕರಕಲಿತಚಿನ್ಮುದ್ರಮಾನಂದರೂಪಮ್**
**ಸ್ವಾತ್ಮಾರಾಮಂ ಮುದಿತವದನಂ ದಕ್ಷಿಣಾಮೂರ್ತಿಮೀಡೇ॥**

*ಬ್ರಹ್ಮನಿಷ್ಠರಾದ ಋಷಿಮುನಿಗಳಿಂದ ಆರಾಧಿಸಲ್ಪಡುವ, ಮೌನೋಪದೇಶದಿಂದಲೇ ಪರಬ್ರಹ್ಮತತ್ತ್ವವನ್ನು ತಿಳಿಸುವ, ಕೈಯಲ್ಲಿ ಚಿನ್ಮುದ್ರವನ್ನು ಧರಿಸಿರುವ, ಸ್ವಾತ್ಮಾ ರಾಮನೂ ಮುದಿತವದನನೂ ಆದ ಆಚಾರ್ಯಪುಂಗವನಾದ ಬಾಲಕ* ***ದಕ್ಷಿಣಾಮೂರ್ತಿ****ಗೆ ನಮಸ್ಕಾರ.*

**ಚಿತ್ರಂ ವಟತರೋರ್ಮೂಲೇ ವೃದ್ಧಾಃ ಶಿಷ್ಯಾ ಗುರುರ್ಯುವಾ।**
**ಗುರೋಸ್ತು ಮೌನಂ ವ್ಯಾಖ್ಯಾನಂ ಶಿಷ್ಯಾಸ್ತು ಛಿನ್ನಸಂಶಯಾಃ॥**

*ವಟವೃಕ್ಷದ ಕೆಳಗಡೆಯಲ್ಲಿ ಒಂದು ಆಶ್ಚರ್ಯದ ನೋಟ; ಅದೇನೆಂದರೆ, ಶಿಷ್ಯರು ವೃದ್ಧರು, ಗುರುವು ಹುಡುಗ; ಗುರೂಪದೇಶ ಮೌನ, ಆದರೆ ಶಿಷ್ಯರ ಸಂಶಯಗಳೆಲ್ಲ ತೊಲಗಿದವು.*

**ಓಂ ನಮಃ ಪ್ರಣವಾರ್ಥಾಯ ಶುದ್ಧಜ್ಞಾನೈಕಮೂರ್ತಯೇ।**
**ನಿರ್ಮಲಾಯ ಪ್ರಶಾಂತಾಯ ದಕ್ಷಿಣಾಮೂರ್ತಯೇ ನಮಃ॥**

*ಓಂಕಾರಸ್ವರೂಪಿಯೂ, ಶುದ್ಧಜ್ಞಾನಸ್ವರೂಪಿಯೂ, ನಿರ್ಮಲನೂ, ಪ್ರಶಾಂತನೂ ಆದ* ***ದಕ್ಷಿಣಾಮೂರ್ತಿ****ಗೆ ನಮಸ್ಕಾರ.*

**ವಟವಿಟಪಿಸಮೀಪೇ ಭೂಮಿಭಾಗೇ ನಿಷಣ್ಣಂ**
**ಸಕಲಮುನಿಜನಾನಾಂ ಜ್ಞಾನದಾತಾರಮಾರಾತ್।**
**ತ್ರಿಭುವನಗುರುಮೀಶಂ ದಕ್ಷಿಣಾಮೂರ್ತಿದೇವಂ**
**ಜನನಮರಣದುಃಖಚ್ಛೇದದಕ್ಷಂ ನಮಾಮಿ॥**

*ಆಲದ ಮರಗಳ ಕೆಳಗೆ ಕುಳಿತುಕೊಂಡು ಮುನಿಗಳಿಗೆ ಜ್ಞಾನೋಪದೇಶವನ್ನು ಮಾಡುತ್ತಾ, ಜನನಮರಣದುಃಖವನ್ನು ನಾಶಮಾಡುವಂಥ, ತ್ರಿಲೋಕಗಳಿಗೂ ಆದಿ ಗುರುವಾದ* ***ದಕ್ಷಿಣಾಮೂರ್ತಿ****ಯನ್ನು ನಮಿಸುತ್ತೇನೆ.*

**ಅನೇಕ ಜನ್ಮ ಸಂಪ್ರಾಪ್ತ ಕರ್ಮಬಂಧವಿದಾಹಿನೇ।**
**ಬ್ರಹ್ಮವಿದ್ಯಾಪ್ರದಾನೇನ ದಕ್ಷಿಣಾಮೂರ್ತಯೇ ನಮಃ॥**

# 37. ಮಹಾನ್ಯಾಸ ಪೂರ್ವಕ ಅಭಿಷೇಕ

**ಪರಮೇಶ್ವರ** ಎಂದಕೂಡಲೇ ಅವನ ಜೊತೆಯಲ್ಲಿಯೇ ವೈದಿಕ ವಿದ್ವಾಂಸರುಗಳಿಗೆ ನೆನಪಾಗುವ ಮತ್ತೊಂದು ಶಬ್ದ **ಮಹಾನ್ಯಾಸ**. ಶಿವನ ಅಭಿಷೇಕ ಪೂಜೆ, ಹೋಮಗಳನ್ನು ಮಾಡುವಾಗ ಈ **ಮಹಾನ್ಯಾಸ**ವನ್ನು ಹೇಳಿಕೊಂಡು ಅನುಷ್ಠಾನ ಮಾಡುವ ಸಂಪ್ರದಾಯವು ನಮ್ಮಲ್ಲಿದೆ. ಆದರೆ **ಮಹಾನ್ಯಾಸ**ವು ಸಾಧ್ಯವಾಗದಿದ್ದರೆ **ಲಘುನ್ಯಾಸ**ವನ್ನಾದರೂ ಮಾಡಬೇಕು.

**ಮಹಾನ್ಯಾಸ**—ಎಂದರೇನು? **ನ್ಯಾಸ** ಎಂದರೆ ಇಡುವುದು ಎಂದರ್ಥ. ಶಿವನ ಆರಾಧಕನು, ಶಿವನ ಭಕ್ತನು ತನ್ನ ಅಂಗಾಂಗಗಳಲ್ಲಿ ಹರಿ ಹರ ಬ್ರಹ್ಮ ಇಂದ್ರ ಅಗ್ನಿ ವಾಯು—ಮುಂತಾದ ದೇವತೆಗಳನ್ನು ಆವಾಹಿಸಿಕೊಳ್ಳುವುದೇ **ಮಹಾನ್ಯಾಸವು**. ಹೀಗೆ ರುದ್ರನ ಆರಾಧಕನು ತಾನೂ ರುದ್ರಸ್ವರೂಪನೇ ಆಗಿಬಿಟ್ಟು ಅನಂತರ ರುದ್ರನನ್ನು ಆರಾಧಿಸಬೇಕು. ಸ್ವತಃ ರುದ್ರನಾಗದವನು ರುದ್ರನನ್ನು ಆರಾಧಿಸಲಾರನು. **ನಾರುದ್ರೋ ರುದ್ರಮರ್ಚಯೇತ್** ಎಂಬುದು ಪ್ರಾಚೀನ ಮಹರ್ಷಿಗಳ **ಮಾತು**.

**ಮಹಾನ್ಯಾಸ**ದ ಕೆಲವು ಮಂತ್ರಗಳನ್ನೀಗ ನೋಡೋಣ: 1. ಪ್ರಜನನೇ ಬ್ರಹ್ಮಾ ತಿಷ್ಠತು 2. ಪಾದಯೋರ್ವಿಷ್ಣುಸ್ತಿಷ್ಠತು 3. ಹಸ್ತಯೋರ್ಹರಸ್ತಿಷ್ಠತು 4. ಬಾಹ್ವೋರಿಂದ್ರಸ್ತಿಷ್ಠತು 5. ಜಠರೇ ಅಗ್ನಿಸ್ತಿಷ್ಠತು 6. ಹೃದಯೇ ಶಿವಸ್ತಿಷ್ಠತು 7. ಕಂಠೇ ವಸವಸ್ತಿಷ್ಠಂತು 8. ವಕ್ತ್ರೇ ಸರಸ್ವತೀ ತಿಷ್ಠತು 9. ನಾಸಿಕಯೋರ್ವಾಯು ಸ್ತಿಷ್ಠತು 10. ನಯನಯೋಃ ಚಂದ್ರಾದಿತ್ಯೌ ತಿಷ್ಠೇತಾಮ್ 11. ಕರ್ಣಯೋಃ ಅಶ್ವಿನೌ ತಿಷ್ಠೇತಾಮ್ 12. ಲಲಾಟೇ ರುದ್ರಾಸ್ತಿಷ್ಠಂತು 13. ಮೂರ್ಧ್ನಿ ಆದಿತ್ಯಾ ಸ್ತಿಷ್ಠಂತು 14. ಶಿರಸಿ ಮಹಾದೇವಸ್ತಿಷ್ಠತು 15. ಶಿಖಾಯಾಂ ವಾಮದೇವಸ್ತಿಷ್ಠತು 16. ಪೃಷ್ಠೇ ಪಿನಾಕೀ ತಿಷ್ಠತು 17. ಪುರತಃ ಶೂಲೀ ತಿಷ್ಠತು 18. ಪಾರ್ಶ್ವಯೋಃ ಶಿವಾಶಂಕರೌ ತಿಷ್ಠೇತಾಮ್ 19. ಸರ್ವತೋ ವಾಯುಸ್ತಿಷ್ಠತು 20. ತತೋ ಬಹಿಃ ಸರ್ವತೋಽಗ್ನಿಜ್ವಾಲಾಮಾಲಾಃ ಪರಿವೃತಾಸ್ತಿಷ್ಠಂತು 21. ಸರ್ವೇಷ್ವಂಗೇಷು ಸರ್ವಾ ದೇವತಾ ಯಥಾಸ್ಥಾನಂ ತಿಷ್ಠಂತು. ಮಾ ರಕ್ಷಂತು, ಯಜಮಾನಂ ರಕ್ಷಂತು; ಹೀಗೆ ಮಾಡುವುದಕ್ಕೆ **ಮಹಾನ್ಯಾಸ**—ಎಂದು ಹೆಸರು.

ಶಿವನ ಆರಾಧಕನು ತಾನು ಮೊದಲಿಗೆ ಶುದ್ಧನಾಗಿ, ತನ್ನ ದೇಹದ ಎಲ್ಲ ಅಂಗಗಳಲ್ಲಿಯೂ ಎಲ್ಲಾ ದೇವತೆಗಳನ್ನೂ ಆವಾಹನೆಮಾಡಿಕೊಳ್ಳಬೇಕು. ಇದಕ್ಕೆ **ಮಹಾನ್ಯಾಸ**— ಎಂದು ಹೆಸರು. ಈ ಮಹಾನ್ಯಾಸಕ್ಕೆ ಬೇರೆಬೇರೆಯ ಕ್ರಮ ಗಳಿರುತ್ತವೆ. ಅಂತೂ ಮಹಾನ್ಯಾಸಪೂರ್ವಕವಾಗಿ ಅಭಿಷೇಕವನ್ನು ಮಾಡಿದರೆ ಇದರಿಂದ ಶಿವನಿಗೆ ತುಂಬಾ ಪ್ರೀತಿಯುಂಟಾಗುತ್ತದೆ. ಅಭಿಷೇಕದಿಂದಲೇ ಶಿವನು ಸುಪ್ರೀತನಾಗುತ್ತಾನಲ್ಲವೆ?

## 38. ಒಂದೇ ಶ್ಲೋಕದಲ್ಲಿ ಶಿವನ ಏಳು ಲಕ್ಷಣಗಳು

ಶಿವನನ್ನು ವರ್ಣಿಸುವ ವೇದಮಂತ್ರಗಳು, ರುದ್ರಸೂಕ್ತಗಳು, ವಿವಿಧ ಸ್ತುತಿಗಳು ಸಹಸ್ರಾರು ಸಂಖ್ಯೆಯಲ್ಲಿ ಪ್ರಸಿದ್ಧವಾಗಿರುತ್ತವೆ. ಅನಂತಮಹಾಮಹಿಮನಾದ ಶಿವನನ್ನು ಅನಂತ ಭಕ್ತರು ಅನಂತರೀತಿಯಲ್ಲಿ ಸ್ತುತಿಸಿರುತ್ತಾರೆ. ಅವೆಲ್ಲವನ್ನೂ ಗಟ್ಟುಮಾಡಿಕೊಂಡು ಭಕ್ತರು ಶಿವನನ್ನು ಆರಾಧಿಸಲು ಆಗದು. ಆದ್ದರಿಂದ ಈ ಕೆಳಗಿನ ಶ್ಲೋಕವೊಂದನ್ನು ಜಪಿಸಿದರೆ ಸಾಕೇ ಸಾಕು.

**ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ।**
**ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ॥**

1. **ಮೃತ್ಯುಂಜಯಾಯ ನಮಃ.** ಪರಮಶಿವನು ಮರಣವನ್ನು ಗೆದ್ದ ಏಕೈಕ ದೇವತೆ. ಮೃತ್ಯುವಿಗೂ ಮೃತ್ಯುವಾದ ಅತಿಮೃತ್ಯುದೇವತೆಯೆಂದರೆ ಪರಮೇಶ್ವರನೊಬ್ಬನೇ.
2. **ರುದ್ರಾಯ ನಮಃ.** ರುದ್ರನೆಂದರೆ ದುಃಖವನ್ನು ದೂರಮಾಡುವ ದೇವತೆ. ತನ್ನ ಭಕ್ತರ ಭಯ, ಶೋಕ, ದಾರಿದ್ರ್ಯ, ಚಿಂತೆಗಳನ್ನು ನಾಶಮಾಡುವ ಕಾರುಣ್ಯದೇವತೆ, ಶಿವ.
3. **ನೀಲಕಂಠಾಯ ನಮಃ.** ಜಗತ್ತಿಗೆ ಅಪಾಯಕಾರಿಯಾಗಿ ಮೃತ್ಯುವಿನಂತಿದ್ದ ಹಾಲಾಹಲವಿಷವನ್ನು ಪಾನಮಾಡಿ, ಜಗತ್ತಿಗೆ ಶಾಂತಿ, ತೃಪ್ತಿ, ನೆಮ್ಮದಿ, ಆನಂದಗಳನ್ನು ಸದಾ ಕರುಣಿಸುತ್ತಿರುವ ಏಕೈಕ ಕಾರುಣ್ಯದೇವತೆ, ಶಿವ.
4. **ಶಂಭವೇ ನಮಃ. ಶಂ ಭವತಿ ಇತಿ ಶಂಭುಃ. ಶಂ** ಎಂದರೆ ಶಾಂತಿಯನ್ನು **ಭವತಿ** ಎಂದರೆ ಅನುಗ್ರಹಮಾಡುವ ಮಂಗಳದೇವತೆಯೇ ಶಿವನು.
5. **ಅಮೃತೇಶಾಯ ನಮಃ.** ಅಮೃತಕ್ಕೆ ಈಶನು. ಅಮೃತವೆಂದರೆ **ಮೋಕ್ಷ**, ಮುಕ್ತಿ; ಮುಕ್ತಿಗೆ ಒಡೆಯನು ಪರಮಶಿವನು.
6. **ಶರ್ವಾಯ ನಮಃ.** ಶರ್ವನೆಂದರೆ ಸುಖಸ್ವರೂಪನು. ಪರಮಶಿವನು ತಾನೂ ಆನಂದಸ್ವರೂಪನಾಗಿದ್ದು ತನ್ನ ಭಕ್ತರಿಗೂ ಹಾಗೂ ಸಮಸ್ತ ಜಗತ್ತಿಗೂ ಆನಂದವನ್ನು ಕೊಡುವ ದೇವತೆ.
7. **ಮಹಾದೇವಾಯ ನಮಃ.** ಶಿವನು ಮಹಾದೇವನು. ಸಕಲಸಂಪತ್ತುಗಳಿಗೂ ಒಡೆಯನಾಗಿ, ಸಕಲ ಸಿದ್ಧಿಗಳನ್ನೂ ಉಳ್ಳವನಾಗಿ, ಆದರೆ ತಾನು ಮಾತ್ರ ವಿರಕ್ತನಾಗಿ, ಆತ್ಮಜ್ಞಾನನಿಷ್ಠನಾಗಿ ದಕ್ಷಿಣಾಮೂರ್ತಿಯಾಗಿರುವ ಪರಮಶಿವನು ದೇವಾಧಿದೇವನಲ್ಲವೇ?

ಹೀಗೆ ಶಿವನನ್ನು ಧ್ಯಾನಿಸುತ್ತಾ ಈ ಮೇಲಿನ ಶ್ಲೋಕವೊಂದನ್ನು ಸದಾ ಜಪಿಸುತ್ತಾ ಇದ್ದರೆ ಅಷ್ಟರಿಂದಲೇ **ಶಿವರಾತ್ರಿ**ಯಾಗುವುದರಲ್ಲಿ ಸಂಶಯವಿಲ್ಲ.

# 39. ಶಿವರಾಮನೂ ರಾಮೇಶನೂ

ಶಿವನಿಗೂ ಶ್ರೀರಾಮನಿಗೂ ಒಂದು ರೀತಿಯ ನಂಟು ಹಾಗೂ ಗಂಟು. ಅನಾದಿಯಾದ, ಜನ್ಮರಹಿತನಾದ, ನಿತ್ಯಮಂಗಳದೇವತೆಯೆಂದರೆ ಪರಮಶಿವ; ತ್ರೇತಾಯುಗದ ಸತ್ಯಧರ್ಮದೇವತೆಯೆಂದರೆ ಶ್ರೀರಾಮ. ಇವರಿಬ್ಬರಿಗೂ ಪರಸ್ಪರ ಅನುರಾಗ, ಪರಸ್ಪರ ಹೊಂದಾಣಿಕೆಯಿರುತ್ತದೆ. ಸಕಲ ಐಶ್ವರ್ಯಗಳಿಗೂ ಒಡೆಯನಾಗಿದ್ದರೂ ಪರಮೇಶ್ವರನು ತಾನು ಮಾತ್ರ ಸರಳ ಜೀವನವನ್ನು ನಡೆಸುತ್ತಾ ಏಕಾಕಿಯಾಗಿ ತಪೋಮಗ್ನನಾಗಿರುತ್ತಾನೆ. ಇಡೀ ಪ್ರಪಂಚಕ್ಕೇ ಅಧಿಪತಿಯಾಗಿದ್ದರೂ ಶ್ರೀರಾಮನು **ಮರ್ಯಾದಾಪುರುಷೋತ್ತಮ** ಎನಿಸಿರುತ್ತಾನೆ.

ಶಿವನದೇವಾಲಯಗಳು ಸಹಸ್ರಾರುಸಂಖ್ಯೆಗಳಲ್ಲಿದ್ದರೂ ಕಾಶೀ-ವಾರಾಣಸೀ ಕ್ಷೇತ್ರವು ಅತ್ಯಂತ ಪ್ರಸಿದ್ಧವೂ, ಪ್ರಶಸ್ತವೂ, ಪುರಾತನವೂ, ಪೌರಾಣಿಕವೂ ಆಗಿದೆ. **ವಾರಾಣಸೀಪುರಪತಿಂ "ಭಜ ವಿಶ್ವನಾಥಮ್"** ಎಂದು ಶ್ರೀಶಂಕರರು ಕಾಶೀ ವಿಶ್ವನಾಥೇಶ್ವರನನ್ನು ಹಾಡಿ ಹೊಗಳಿದ್ದಾರೆ. ಕಾಶಿಯಲ್ಲಿ ವಾಸಮಾಡುತ್ತಾ, ವಿಶ್ವನಾಥನನ್ನು ಪೂಜಿಸುತ್ತಾ ಇರುವ ತನ್ನ ಭಕ್ತರಿಗೆ ವಿಶ್ವನಾಥನು '**ಶ್ರೀರಾಮ ಜಯರಾಮ ಜಯಜಯರಾಮ**' ಎನ್ನುವ ಪರಮಮಂಗಳಕರವಾದ **ಶ್ರೀರಾಮ ತಾರಕಮಂತ್ರ**ವನ್ನು ಕಿವಿಗಳಲ್ಲಿ ಉಪದೇಶಮಾಡುತ್ತಾನಂತೆ.

**ಶ್ರೀರಾಮ ರಾಮ ರಾಮೇತಿ ರಮೇ ರಾಮೇ ಮನೋರಮೇ।**
**ಸಹಸ್ರನಾಮತಸ್ತುಲ್ಯಂ ರಾಮನಾಮ ವರಾನನೇ॥**

ಎಂದು ಪರಮೇಶ್ವರನು ತನ್ನ ಮಡದಿ ಪಾರ್ವತಿಗೆ ತಿಳಿಸಿರುತ್ತಾನಲ್ಲವೆ?

ಇನ್ನು ಶ್ರೀರಾಮಚಂದ್ರನು ದಕ್ಷಿಣಸಮುದ್ರಕ್ಕೆ ಸೇತುವೆಯನ್ನು ಕಟ್ಟಿ, ಲಂಕಾನಗರಿಯನ್ನು ಪ್ರವೇಶಿಸಿ, ರಾವಣೇಶ್ವರನನ್ನು ಸಂಹರಿಸಿ, ಸೀತಾದೇವಿಯೊಂದಿಗೆ ಪಟ್ಟಾಭಿಷಿಕ್ತನಾಗುತ್ತಾನೆ. ದಕ್ಷಿಣಸಮುದ್ರತೀರದಲ್ಲಿರುವ **ರಾಮೇಶ್ವರಕ್ಷೇತ್ರ**ದಲ್ಲಿ ಶ್ರೀರಾಮಚಂದ್ರನೇ ಈಶ್ವರನನ್ನು ಸ್ಥಾಪಿಸಿರುತ್ತಾನೆ. ಆದ್ದರಿಂದಲೇ ಅದು **ರಾಮೇಶ್ವರ**—ಎಂದೇ ಆಗಿದೆ. ರಾಮೇಶ್ವರದಲ್ಲಿ ಶ್ರೀರಾಮನು ತನ್ನ ಭಕ್ತರಿಗೆ '**ಓಂ ನಮಃ ಶಿವಾಯ**' ಎಂಬ **ಶಿವಪಂಚಾಕ್ಷರೀ** ಮಂತ್ರವನ್ನು ಉಪದೇಶಿಸುತ್ತಾನಂತೆ. ಅಂತೂ ಹೀಗೆ ಶ್ರೀರಾಮನಿಗೆ ಶಿವನೂ, ಶಿವನಿಗೆ ಶ್ರೀರಾಮನೂ ಅತ್ಯಂತ ಪ್ರಿಯರಾಗಿರುತ್ತಾರೆ. ಆದ್ದರಿಂದಲೇ ಶಿವನು **ಶಿವರಾಮ**ನಾಗಿಯೂ ಶ್ರೀರಾಮನು **ರಾಮೇಶ್ವರ**ನಾಗಿಯೂ ಭಕ್ತರಿಗೆ ವರಗಳನ್ನು ಕೊಡುತ್ತಿದ್ದಾರೆ. ಹರಿಯೇ ಹರನಾಗಿಯೂ, ಹರನೇ ಹರಿಯಾಗಿಯೂ ತೋರುತ್ತಿದ್ದಾರೆ–ಎಂದು ತಿಳಿಯಬೇಕು.

**ಶಿವರಾಮಂ ಸದಾರಾಮಂ ರಾಮೇಶಂ ಚ ಶಿವಪ್ರಿಯಮ್।**
**ವಂದೇ ಪರಸ್ಪರಾತ್ಮಾನೌ ಸರ್ವಸೌಭಾಗ್ಯಸಿದ್ಧಯೇ॥**

# 40. ಶಿವೋಽಹಂ ಶಿವೋಽಹಮ್

ಶ್ರೀಶಂಕರರು ಈ **"ನಿರ್ವಾಣಷಟ್ಕಮ್"**—ಅನ್ನು ರಚಿಸಿರುತ್ತಾರೆ. ಪ್ರತಿಯೊಂದು ಶ್ಲೋಕದ ನಾಲ್ಕನೆಯ ಪಾದದಲ್ಲಿ **"ಚಿದಾನಂದರೂಪಃ ಶಿವೋಽಹಂ ಶಿವೋಽಹಮ್"** ಎಂಬ ಪಲ್ಲವಿಯು ಇರುತ್ತದೆ. ಈ ಸ್ತೋತ್ರದ ಪಠನ ಹಾಗೂ ಅರ್ಥಾನುಸಂಧಾನದಿಂದ **ಶಿವರಾತ್ರಿಯು** ಅನ್ವರ್ಥ **ಶಿವರಾತ್ರಿಯಾಗುತ್ತದೆ.**

**ಮನೋಬುದ್ಧ್ಯಹಂಕಾರಚಿತ್ತಾನಿ ನಾಹಂ**
**ನ ಚ ಶ್ರೋತ್ರಜಿಹ್ವೇ ನ ಚ ಘ್ರಾಣನೇತ್ರೇ।**
**ನ ಚ ವ್ಯೋಮಭೂಮಿರ್ನ ತೇಜೋ ನ ವಾಯುಃ**
**ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥೧॥**

**ನ ಚ ಪ್ರಾಣಸಂಜ್ಞೋ ನ ವೈ ಪಂಚವಾಯುಃ**
**ನ ವಾ ಸಪ್ತಧಾತುರ್ನ ವಾ ಪಂಚಕೋಶಃ।**
**ನ ವಾಕ್ಪಾಣಿಪಾದೌ ನ ಚೋಪಸ್ಥಪಾಯೂ**
**ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥೨॥**

**ನ ಮೇ ದ್ವೇಷರಾಗೌ ನ ಮೇ ಲೋಭಮೋಹೌ**
**ಮದೋ ನೈವ ಮೇ ನೈವ ಮಾತ್ಸರ್ಯಭಾವಃ।**
**ನ ಧರ್ಮೋ ನ ಚಾರ್ಥೋ ನ ಕಾಮೋ ನ ಮೋಕ್ಷಃ**
**ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥೩॥**

**ನ ಪುಣ್ಯಂ ನ ಪಾಪಂ ನ ಸೌಖ್ಯಂ ನ ದುಃಖಂ**
**ನ ಮಂತ್ರೋ ನ ತೀರ್ಥಂ ನ ವೇದಾ ನ ಯಜ್ಞಾಃ।**
**ಅಹಂ ಭೋಜನಂ ನೈವ ಭೋಜ್ಯಂ ನ ಭೋಕ್ತಾ**
**ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥೪॥**

**ನ ಮೃತ್ಯುರ್ನ ಶಂಕಾ ನ ಮೇ ಜಾತಿಭೇದಃ**
**ಪಿತಾ ನೈವ ಮೇ ನೈವ ಮಾತಾ ಚ ಜನ್ಮ।**
**ನ ಬಂಧುರ್ನ ಮಿತ್ರಂ ಗುರುರ್ನೈವ ಶಿಷ್ಯಃ**
**ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥೫॥**

**ಅಹಂ ನಿರ್ವಿಕಲ್ಪೋ ನಿರಾಕಾರರೂಪೋ**
**ವಿಭುತ್ವಾಚ್ಚ ಸರ್ವತ್ರ ಸರ್ವೇಂದ್ರಿಯಾಣಾಮ್।**
**ನ ಚಾಸಂಗತಂ ನೈವ ಮಾತಾ ನ ಮೇಯಃ**
**ಚಿದಾನಂದರೂಪಃ ಶಿವೋಽಹಂ ಶಿವೋಽಹಮ್ ॥೬॥**

**॥ಓಂ ತತ್ ಸತ್, ಸರ್ವಂ ಶಿವಾರ್ಪಣಮಸ್ತು॥**

## ವೇದಾಂತಚಕ್ರವರ್ತಿ, ಮಹಾಮಹೋಪಾಧ್ಯಾಯ ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಗ್ರಂಥಗಳು

1. "ವಿವೇಕಭಾಸ್ಕರ"
2. "ಶಾಂಕರ ಸಂವತ್ಸರ"
3. "ವೇದಾಂತ ಸಂವತ್ಸರ"
4. "ಗೀತಾ ಸಂವತ್ಸರ"
5. "ಸುಭಾಷಿತ ಸಂವತ್ಸರ"
6. "ಪ್ರಬೋಧ ಚಿಂತಾಮಣಿ"
7. "ಜ್ಞಾನಾಮೃತಬಿಂದು"
8. "ಗೀತೋಪದೇಶಾಮೃತ"
9. "ಜರ್ಮನಿಯಲ್ಲಿ ಶರ್ಮರು"
10. ವಿದ್ವಾನ್ ಕೆ. ಜಿ. ಸುಬ್ರಾಯಶರ್ಮಾ
11. "ವ್ಯಾಸ ಪೂರ್ಣಿಮಾ"
12. "ಕೇನ ರಸಾಯನ"
13. "ಜೀವನ್ಮುಕ್ತ ಚತುಷ್ಟಯ"
14. "ಶಿವರಾತ್ರಿ"
15. "ನವೋಪನಿಷದಃ"
16. "ಶಾಂತಿಮಂತ್ರಗಳು"
17. "ವೇದಮಹಿಮೆ"
18. "50 Reflections on Morals"
19. "ಪೀಯೂಷ ಧಾರಾ"
20. "ಆದಿಗುರು ಶಂಕರ"
21. "48 'ಅಷ್ಟಕ' ಸ್ತೋತ್ರಗಳು"
22. "ಕನ್ನಡ ಶಂಕರ"
23. "ಆರಾಧನ ಸಂದೇಶ"
24. "ಸರಳ ರಮಣ"
25. "ನ ಹಿ ಜ್ಞಾನೇನ ಸದೃಶಂ"
26. "ಉಪದೇಶಸಿಂಚನಂ"
27. "ಸುದಿನಂ"
28. "ಶಂಕರಜಯಂತೀ"
29. "ಬಾಲರಾಮಾಯಣಂ"
30. "ಸಂದೇಶಾಮೃತಂ"
31. "ವಿಭೂತಿರೂಪಿಕೃಷ್ಣ"
32. "ಅಧ್ಯಾರೋಪಾಪವಾದ"
33. "ಶಂಕರ Ph.D."
34. "ಗೌಡಪಾದಾಮೃತ"
35. "ವೇದಾಂತಮಕರಂದ"
36. "ಶ್ರೀರಮಣಸುಧಾ"
37. "ಧರ್ಮ-ವೇದ-ಬ್ರಹ್ಮ"
38. "ಸದ್ಗುರೂಪಾಸನಂ"
39. "ಜನ್ಮಾಂತರ"
40. "ಗೀತಾಕಲ್ಪತರು"
41. "ಮಹರ್ಷಿಗಳು"
42. "ಉಪನಯನಂ"
43. "ಔಪನಿಷದ ಪುರುಷ"
44. "ಸಂಸ್ಕೃತ ವೈಭವ"
45. "ತೈತ್ತಿರೀಯದ ತಿರುಳು"
46. "ರಾಮಾಂಜನೇಯ"
47. ವೇದಾಂತದಲ್ಲಿನ ಪದಗಳೂ ಅರ್ಥಗಳೂ
48. "ತತ್ತ್ವಮಸಿ"
49. "ಬ್ರಹ್ಮಜ್ಞಾನಫಲಂ"
50. "ಜ್ಞಾನಸಾಧನಗಳು"
51. "108 'ಅಷ್ಟಕ' ಸ್ತೋತ್ರಗಳು"
52. "ಚತುಷ್ಟಯ ಸಂಗ್ರಹ"
53. "ಸಂಗ್ರಾಹಕ ಶ್ಲೋಕಗಳು"
54. "ಶ್ರೀಶ್ರೀಗಳ ಸಂಶೋಧನೆ"
55. "ಮಹರ್ಷಿಗಳ 'ಅಷ್ಟಕ' ಸ್ತೋತ್ರಗಳು"
56. "ಶಾಂಕರ ಮಕರಂದ"
57. "ನೀತಿ ಶ್ಲೋಕಗಳು"
58. "ಕೈವಲ್ಯೋಪನಿಷತ್"
59. "ವಿವೇಕ ರತ್ನ"
60. "ಗುರುಶಿಷ್ಯ ಸಂಬಂಧ"
61. "ಲಕ್ಷಣ ಶ್ಲೋಕಗಳು"
62. "ಶ್ರೀರಮಣರ ಉಪದೇಶಸಾರ"
63. "ಅಜ್ಞಾನ ವಿಮುಕ್ತಿ"
64. "ವಂದೇ ಶಂಕರಸದ್ಗುರುಮ್"
65. "ಚತುಸ್ಸೂತ್ರೀಭಾಷ್ಯಸಾರ"
66. ಶ್ರೀರಮಣಮಹರ್ಷಿಗಳ "ಸದ್ದರ್ಶನಮ್"
67. "ತಸ್ಮೈ ಶ್ರೀಗುರವೇ ನಮಃ"
68. "ಗೀತೋಪನಿಷತ್"
69. "ಪ್ರಸ್ಥಾನತ್ರಯಂ"
70. "ಪ್ರಥಮ ಪುಸ್ತಕಂ"
71. "ನನ್ನ ಗುರುಕುಲವಾಸ"
72. "ವೇದಾಂಗಗಳು"
73. "ಗೀತಾಜಯಂತೀ"
74. "ಶಂಕರಹೃದಯಂ"

## ವೇದಾಂತವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾರವರ ವೇದಾಂತ ಪ್ರವಚನಗಳು M.P.3 ಸಿ.ಡಿ.ಗಳಲ್ಲಿ ಲಭ್ಯವಿವೆ

1. ದಶೋಪನಿಷತ್ತುಗಳ ಸಂದೇಶಗಳು (10 ಗಂಟೆಗಳು)
2. ಬ್ರಹ್ಮಸೂತ್ರಶಾಂಕರಭಾಷ್ಯ, ಚತುಸ್ಸೂತ್ರೀಭಾಷ್ಯ (56 ಗಂಟೆಗಳು)
3. ಶ್ವೇತಾಶ್ವತರೋಪನಿಷತ್ ಶಾಂಕರಭಾಷ್ಯಂ (108 ಗಂಟೆಗಳು)
4. ಐತರೇಯೋಪನಿಷತ್ ಶಾಂಕರಭಾಷ್ಯಂ (48 ಗಂಟೆಗಳು)
5. ಈಶಾವಾಸ್ಯೋಪನಿಷತ್ ಶಾಂಕರಭಾಷ್ಯಂ (28 ಗಂಟೆಗಳು)
6. ಅಧ್ಯಾರೋಪ ಅಪವಾದಪ್ರಕ್ರಿಯೆ (90 ನಿಮಿಷಗಳು)
7. ನಮಗೆ ಇಂದು ವೇದಾಂತ ಬೇಕೇ? (90 ನಿಮಿಷಗಳು)
8. ಮುಂಡಕೋಪನಿಷತ್–ಶಾಂಕರಭಾಷ್ಯಮ್ (45 ಗಂಟೆಗಳು)
9. ಕಾಠಕೋಪನಿಷತ್–ಶಾಂಕರಭಾಷ್ಯಮ್ (69 ಗಂಟೆಗಳು)
10. ದ್ವಾದಶವೇದಾಂತರತ್ನಮಾಲಿಕಾ (13 ಗಂಟೆಗಳು)
    (12 ವೇದಾಂತ ಸಂದೇಶಗಳ ಪ್ರವಚನಗಳ ಸಂಗ್ರಹ)
11. ದಶೋಪನಿಷತ್ತುಗಳ ಪ್ರವಚನಗಳು (DVD 10 ಗಂಟೆಗಳು)
12. अध्यारोपापवादमहिमा (60 ನಿಮಿಷ)
13. Avasthaatraya Prakriya (60 Minutes)
14. माण्डूक्यरहस्यविवृतिः (60 ನಿಮಿಷ)

* * * * * * *

---

**ವಿವರಗಳಿಗೆ ಮತ್ತು ಪ್ರತಿಗಳಿಗೆ ಲೇಖಕರಲ್ಲಿ ವಿಚಾರಿಸಿರಿ :**
**ವಿದ್ವಾನ್ ಡಾ॥ ಕೆ. ಜಿ. ಸುಬ್ರಾಯಶರ್ಮಾ, M.A., D.Litt.**
ನಂ. 127, "ಸೀತಾ-ಪ್ರೀತಿ", ಬಾಲಾಜಿ ನಗರ
ಐಸಿಐಸಿಐ ಬ್ಯಾಂಕ್ ಕ್ರಾಸ್ ರೋಡ್, ಉತ್ತರಹಳ್ಳಿ ಮುಖ್ಯರಸ್ತೆ
ಸುಬ್ರಹ್ಮಣ್ಯಪುರ ಪೋಸ್ಟ್, ಬೆಂಗಳೂರು-560 061.
**ದೂರವಾಣಿ : 080-2639 6786; ಮೊಬೈಲ್ : 98862 81622**




**"ಗೀತೋಪನಿಷತ್"**-68 ಲೋಕಾರ್ಪಣ ಸಮಾರಂಭದಲ್ಲಿ ಶ್ರೀಯುತರಾದ ಡಾ॥ ಕೆ. ವಿ. ರಾಮು (USA),
ಶ್ರೀಮತಿ ರುಕ್ಮಿಣಿ ರಾಮು (USA), ಡಾ॥ ಡಿ. ಸಿ. ರಾವ್ (USA),
ಡಾ॥ ವಿಜಯೇಂದ್ರ ಮುನಿಕೋಟಿ (ಜರ್ಮನಿ), ಡಾ॥ ಸುಂದರರಾಜನ್. 31-12-2015, ಗುರುವಾರ




**"ಗೀತೋಪನಿಷತ್"**-68 ಲೋಕಾರ್ಪಣ ಸಮಾರಂಭದಲ್ಲಿ ಡಾ॥ ಕೆ. ವಿ. ರಾಮು,
ಶ್ರೀಮತಿ ರುಕ್ಮಿಣಿ ರಾಮು (USA), ಡಾ॥ ಡಿ. ಸಿ. ರಾವ್ (USA), ಡಾ॥ ವಿಜಯೇಂದ್ರ ಮುನಿಕೋಟಿ
(ಜರ್ಮನಿ). ಶ್ರೀ ಸಿ. ಎ. ಸಂಜೀವಮೂರ್ತಿಗಳು ಮಾತನಾಡುತ್ತಿದ್ದಾರೆ. 31-12-2015, ಗುರುವಾರ

